# ಕಂಕಣ

ಹೊಯಿಸಳ

ಪ್ರಕಾಶಕರ
**ಕರ್ಣಾಟಕ ಸಂಘ, ಮಧುಗಿರಿ.**

# ಮುನ್ನುಡಿ.

ಮಧುಗಿರಿಯ ಕರ್ಣಾಟಕದ ಸಂಘದ ನಮ್ಮ ಮಿತ್ರರು ಶ್ರೀ ಹೊಯಿಸಳರ ಕವನಗಳ ಈ ಸಂಗ್ರಹವನ್ನು ಅಚ್ಚು ಮಾಡಲು ಯೋಚಿಸಿದ್ದಾರೆ. ಹಲವು ಕಾರಣಗಳಿಂದ ಮಧುಗಿರಿ ನನಗೆ ಪ್ರಿಯವಾದ ಊರು. "ಅಭಿಸಾರ" ದ ಕರ್ತೃಗಳೆಂಬ ಕಾರಣದಿಂದ ನನಗೆ ಹೊಯಿಸಳರಲ್ಲಿ ಬಹಳ ಮರ್ಯಾದೆ ಮತ್ತು ಪ್ರೀತಿ. ನಮ್ಮ ಕಾವ್ಯವನದಲ್ಲಿ ಈಗ ಹಾಡುತ್ತಿರುವ ಹಕ್ಕಿಗಳ ಮಧ್ಯೆ ಇವರದೇ ಒಂದು ಬೇರೆಯ ಸ್ವರ. ಇವರದೇ ಒಂದು ಇಂಪು. ಈ ಪ್ರಕಟನೆಯ ಕೆಲಸದಲ್ಲಿ ನನ್ನ ಹೆಸರೂ ಸೇರಿರಬೇಕೆಂದು ಸಂಘದ ಮಿತ್ರರೂ ಕವಿಗಳೂ ಅಪೇಕ್ಷಿಸಿರುವುದನ್ನು ನಾನು ಒಂದು ಗೌರವವೆಂದು ಭಾವಿಸುತ್ತೇನೆ. ಶ್ರೀ ಹೊಯಿಸಳರ ಕೃತಿ ಬೆಳೆಯಬೇಕು ಮತ್ತು ನಮ್ಮ ಜನಕ್ಕೆ ಹೆಚ್ಚು ಚೆಚ್ಚಾಗಿ ತಿಳಿಯಬೇಕು. ಮಧುಗಿರಿಯ ಸಂಘದ ಕೆಲಸ ಶ್ರೇಯಸ್ಕರವಾಗಿ ಮುಂದುವರಿಯಬೇಕು. ಎಲ್ಲ ಸಂಘ ಎಲ್ಲ ಕವಿಗಳ ವಿಷಯದಲ್ಲಿ ಹೀಗೆಂದು ಕೋರುವ ನಾನು ಈ ಸಂಘ ಈ ಕವಿಗಳ ಬಗ್ಗೆ ಇದನ್ನು ವಿಶೇಷ ಆದರದಿಂದ ಹಾರಯಿಸುತ್ತೇನೆ.

ಚಿಕ್ಕಮಗಳೂರು
ಭಾವ ಸಂ|| ಫಾಲ್ಗುಣ
ಬಹುಳ ಏಕಾದಶಿ

ಮಾಸ್ತಿ ವೆಂಕಟೇಶಐಯ್ಯಂಗಾರ್‌

# ಬಿನ್ನಹ

'ಈ ಪುಸ್ತಕ ' ಪುಷ್ಪಕವು '' ತಾಯಿನಾಡಿನ ಪೂಜೆಯ ಸಲುವಾಗಿ ಫಲ ಪುಷ್ಪಾದಿಗಳನ್ನು ಹೊತ್ತು ಹೊರಟಿದೆ. ಶ್ರೀ ಮಾಸ್ತಿಯವರ ಪರುಸ ಹಸ್ತವು ಇದನ್ನು ಅಕ್ಷರ ವಿಮಾನವನ್ನಾಗಿ ಮಾಡಿ ಬಿಟ್ಟಿದೆ. ಹಿರಿಯರೆ! ಗೆಳೆಯರೆ! ಗೆಜ್ಜೆಯ ಕಾಲಿನ ಅಜ್ಜರೆ! ಈ ಕಂಕಣ ಕಟ್ಟಿ-ನಾಡಿನ ಸೇವೆಯ ವ್ರತ ಹಿಡಿಯಿರಿ-ಈ ಭಾವಗಳನ್ನು ತೊಟ್ಟು-ಈ ಸಿದ್ಧ ಫಲ ಪುಷ್ಪಗಳನ್ನು ದೇವಿಗೆ ಸಮರ್ಪಿಸಿ-ಸೇವಿಸಿ-ನನಗೆ ನಿಮ್ಮ ಪುಣ್ಯದ ಸುಂಕ ಸಲಿಸಿರಿ! ಸಾಹಿತ್ಯ ಮಧುಗಿರಿಯಲ್ಲಿ ಮೂಲ ಮೂರ್ತಿ ವಿರಾಜಿಸುವಳು-ಆಕೆಯ ಅಡಿಗಳಲ್ಲಿ ಎಡೆ ಈ ಕಾಣಿಕೆಗೆ ದೊರಕಬೇಕಾದರೆ ನಾಡಿನ ಕುವರರಾದ ತಮ್ಮ ಹರಕೆಯಿಂದಲೇ ಸರಿ.

ಈ ಪದ್ಯಗಳನ್ನು ಓದಿ ನಲಿಯುತ್ತ, ಅಕ್ಷರ ಜೋಡಿಸುತ್ತ ಮತ್ತು ಮುದ್ರಣ ಮಾಡುತ್ತ-ಇದೊಂದು ಆಹ್ಲಾದ ಮುದ್ರಿಕೆ ಯಾಗಲು ಸಹಾಯ ಮಾಡಿದವರು:-ತುಮಕೂರು ಕಂಪಾಜಿಟರ್ ಶ್ರೀ ಟಿ. ಎಸ್. ಪುಟ್ಟರಾಯಪ್ಪ, ಟಿ. ಜಿ. ಮರಿಯಪ್ಪ ಮತ್ತು ಮುಖಚಿತ್ರವನ್ನು ಬರೆದು ಕೊಟ್ಟವರು ಶ್ರೀ|| ಎಸ್. ವಿ. ರಾಮಯ್ಯನವರು,-ಈ ಸೇವೆಯಲ್ಲಿ ನನಗೆ ನಂದಾದೀವಿಗೆಯಾಗಿದ್ದ ಹಿಂದೀ ವಿಶಾರದ ಶ್ರೀ ಕೆ. ನಾರಾಯಣಾಚಾರ್ಯ, ಕಾರ್ಯದರ್ಶಿ, ಕರ್ಣಾಟಕ ಸಂಘ—ಇವರಿಗೆ ನಾನು ಚಿರಋಣಿ. ಕರ್ಣಾಟಕ ಸಂಘದ ಪ್ರೆಸಿಡೆಂಟರು, ವೈಸ್ ಪ್ರೆಸಿಡೆಂಟರು, ಸದಸ್ಯರುಗಳು ಹಾಗೂ ಮಧುಗಿರಿಯ ಹಿರಿಯರೂ, ಕಿರಿಯರೂ ಸಹ ನನ್ನಲ್ಲಿ ಅಮಿತವಾದ ಪ್ರೇಮವನ್ನು ತೋರಿಸಿದ್ದಾರೆ..... ಈ ಅಳಿಲು ಸೇವೆಯನ್ನು ಸ್ವೀಕರಿಸಿದ ಈ ಮಧು ಮೂರ್ತಿಗಳ ಕೀರ್ತಿಯು ಸಾಹಿತ್ಯ ಸಾಗರಕ್ಕೆ ಹರಿಯಲಿ. ಇದುವರೆಗೆ ಈ ಪದ್ಯಗಳಲ್ಲಿ ಅನೇಕವನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಮಾಡಿಸಿದ್ದ ಪತ್ರಿಕಾ ಸಂಪಾದಕರುಗಳಿಗೆಲ್ಲಾ ನನ್ನ ವಂದನೆಗಳು.

**" ಹೊಯಿಸಳ "**

# ಕುಸುಮಾವಳಿ

# ದಯ ಮಾಡಿ ತುಸು ತಾಳಿ ತಿಳಿದೋದಿ

| ವಿಳಾಸ | ಪುಟ | ಸಾಲು | ತಿದ್ದುಪಡಿ |
|---|---|---|---|
| ಗಣಪತಿ | ೨ | ೩ | ಸಲಹುತಿರು |
| ಪಂಡಿತ | ೧೪ | ೧೨ | ತನುವ ತಾ ಮರೆತಿಹನು |
| ಶಿಲ್ಪಿ | ೨೩ | ೧೮ | ಚಲ್ವರೂಹ |
| ಏನುಪಾಡಲಿ | ೨೭ | ೧೬ | ತಿಳಿವನ್ನಿ ಬಿಳಿಜೋತಿಗಿದೆ |
| ಸಾಂತಾಳಿ | ೩೦ | ೧೯ | ಹಿಡಿವಳು |
| ,, | ೩೧ | ೧೧ | ಮೂರುತಿ |
| ಆತಂಕ | ೩೫ | ೪ | ಮೋಡಾ |
| ,, | ,, | ೭ | ಮೋಡಗಳನುಟ್ಟು |
| ,, | ,, | ೯ | ನೀರಗನ್ನಡಿ |
| ,, | ,, | ೧೫ | ಸಿಲುಕಿ |
| ,, | ,, | ೧೭ | ಬಿಟ್ಟಹಿಡಿ |
| ,, | ,, | ,, | ಮೆಟ್ಟಿ |
| ,, | ,, | ೨೦ | ದೃಷ್ಟಿಯಲ್ಲಿ |
| ,, | ,, | ೨೨ | ನಿಲಲಿಲ್ಲ |
| ಪ್ರೇಮ | ೩೭ | ೩ | ಉನ್ಮತ್ತ |
| ನರ-ವಾನರ | ೪೦ | ೯ | ಪರಿಯಿಸ್ಟೆ |
| ಯಾತ್ರೆ | ೪೫ | ೧೧ | ಬಿಸಿರಕ್ತ ಎಂದರವರು |

# ಕೆಲವು ಪದಗಳಿಗೆ ಅರ್ಥ ಮುಂತಾದುವು

ಉಘೇ—ಶುದ್ಧ ಕನ್ನಡ ಜಯಕಾರವು, ಚೂಡಿ—ಬಂಗಾಳೀ ಕೈಬಳೆ, ಅಚ್ಚೋದ್ಯಪ್ಪ—ಅತಿಶಯಮಾಡುವ ಮನುಷ್ಯ, ಚಾಳೀಸು—ಕನಡಕ, ದೃಷ್ಟಿಮಾಂದ್ಯ, ಬಂಭರ—ಭ್ರಮರ, ಛವಿ—ಬೆಳಕು, ಸೊಡರು— ದೀಪ, ಭವಣೆ—ತೊಂದರೆ, ಪೋರಿ—ಗಂಧರ್ವ ಸ್ತ್ರೀ, ಸಾಂತಾಳೀ—ಉತ್ತರ ದೇಶದ ಅನಾಗರೀಕ ಸ್ತ್ರೀ.

# ಪ್ರಕಾಶಕರ ನುಡಿಗಳು

ಮಧುಗಿರಿಯ ಕರ್ಣಾಟಕ ಸಂಘವು ಸ್ಥಾಪಿತವಾಗಿ ಕೇವಲ ೫ ತಿಂಗಳು ಗಳು ಮಾತ್ರ ಆಗಿರುತ್ತೆ. ಇತರ ಭಾಷೆಗಳಿಗಿಂತ ನಮ್ಮ ಕನ್ನಡ ಭಾಷೆಯು ಯಾವ ಭಾಗದಲ್ಲಿಯೂ ಕಡಮೆಯಾಗಿಲ್ಲವೆಂಬುದನ್ನು ಇತ್ತೀಚೆಗೆ ಅನೇಕ ಮಹನೀಯರು ತೋರಿಸುತ್ತಿದಾರೆ. ಪ್ರಪಂಚದಲ್ಲಿ ಆಗಲೇ ನಮ್ಮ ಕನ್ನಡ ಭಾಷೆಯು ಮನ್ನಣೆಯನ್ನು ಗಳಿಸುತ್ತಿರುವ ಅಂಶವು ಎಲ್ಲರಿಗೂ ತಿಳಿದ ವಿಷಯವೇ ಆಗಿರುತ್ತೆ. ಆದಾಗ್ಯೂ ಕನ್ನಡ ಭಾಷೆಗೆ ಎಷ್ಟು ಮನ್ನಣೆ ದೊರಕಬೇಕೋ ಅಷ್ಟು ಇನ್ನೂ ದೊರಕುತ್ತಿಲ್ಲ. ಕರ್ಣಾಟಕ ಸಂಘಗಳ ಮೂಲಕ ಇದು ಆಗಬೇಕಾಗಿದೆ.

ಉಚ್ಚ ತರಗತಿಯ ಕರ್ಣಾಟಕ ಸಂಘಗಳ ಆದರ್ಶಗಳನ್ನು ಮುಂದಿಟ್ಟುಕೊಂಡು ಈ ನಮ್ಮ ಮಧುಗಿರಿ ಕರ್ಣಾಟಕ ಸಂಘವು ಕೆಲಸ ಮಾಡುತ್ತಿದೆ. ಈ ಸಂಘವು ರ್ಣಾಟಕದಲ್ಲಿನ ಪೂಜ್ಯರಾದ ಕನ್ನಡ ಭಾಷಾ ಸೇವಕರನ್ನು ಆಗಾಗ ಜನರಿಗೆ ಪರಿಚಯ ಮಾಡಿಸಿ ಮಾತ್ರ ಭಾಷಾ ಸಾಹಿತ್ಯದಲ್ಲಿ ಜನರಿಗೆ ಪ್ರೀತಿಯನ್ನು ಹೆಚ್ಚಿಸಲು ಕೆಲಸ ಮಾಡುತ್ತಿದೆ. ಈ ಪ್ರಯತ್ನಗಳಲ್ಲಿ ಈ ಮಹನೀಯರುಗಳು ರಚಿಸಿರುವ ಕವಿತೆಗಳನ್ನಾಗಲೀ, ಇತರ ಲೇಖನಗಳನ್ನಾಗಲೀ ಮುದ್ರಣ ಮಾಡಿಸಿ ಪ್ರಕಟ ಪಡಿಸುವುದೂ ಮುಖ್ಯವಾದದು.

ಇಂಥಾ ಪ್ರಯತ್ನದಲ್ಲಿ ಈ ಸಂಘಕ್ಕೆ ಈ ಗಾಗಲೇ 'ಹೊಯಿಸಳ' ಎಂಬ ಹೆಸರನ್ನು ಪಡೆದಿರುವ ಈ ಊರು ಹೈಸ್ಕೂಲು ಸಹಾಯೋಪಾಧ್ಯಾಯರಾದ ಶ್ರೀಯುತ ಲಕ್ಷ್ಮಣರಾಯರವರು ದೊರಕಿದುದು ಸಂಘದ ಪುಣ್ಯವೆಂದೇ ಭಾವಿಸಬೇಕು. ಇವರ ವಿಚಾರ ಇಲ್ಲಿ ಹೆಚ್ಚು ಹೇಳಬೇಕಾಗಿಲ್ಲ. ಒಂದೇ ಮಾತಿನಲ್ಲಿ ಹೇಳುವದಾದರೆ ಈ ಸಂಘದ ಜೀವನೇ ಅವರು 'ಎನ್ನ

ಬಹುದು. ಇನ್ನು ಇವರ ಕವಿತೆಯ ವಿಷಯ-ಇಡೀ ಕರ್ಣಾಟಕ ದೇಶದಲ್ಲಿ ಪ್ರಸಿದ್ಧಿ ಪಡದಿರುವ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರವರು ಈ ಸಂಘದ ಕೋರಿಕೆಯಂತೆ ದಯಮಾಡಿ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದಿರುತ್ತಾರೆ—ಆ ಮಾನ್ಯ ಬರವಣಿಗೆಗಿಂತಹೆಚ್ಚು ಹೇಳಬೇಕಾದುದಿಲ್ಲ. ವಿಜ್ಞ ಪಾಠಕರೇ ಕವಿಗಳ ಕವಿತಾ ಪ್ರೌಢತೆಯ ಪ್ರತಿಭೆಯನ್ನು ಗ್ರಂಥಾವಲೋಕನದಿಂದ ತಿಳಿಯಬಹುದು.

ಈ ಸಂಘವನ್ನು ಹರಸಿರುವ ಪೂಜ್ಯ ಮಾಸ್ತಿ ವೆಂಕಟೇಶಯ್ಯಂಗಾರ್ಯರವರಿಗೂ ಈ ಗ್ರಂಥ ಕರ್ತೃಗಳಾದ ಶ್ರೀಮಾನ್ ಹೊಯಿಸಳರಿಗೂ, ಮತ್ತು ಶ್ರಮವಹಿಸಿ ಆದಷ್ಟು ಸುಂದರವಾಗಿ ಪುಸ್ತಕವನ್ನು ಅಚ್ಚು ಹಾಕಿಸಿಕೊಟ್ಟ ಮಾಲೀಕರಿಗೂ, ಪ್ರೆಸ್ ಕೆಲಸಗಾರರಿಗೂ ಮತ್ತು ಬ್ಲಾಕನ್ನು ಎರವಾಗಿ ಕೊಟ್ಟ ಸತ್ಯಶೋಧನ ಪುಸ್ತಕ ಭಂಡಾರದ ಮಾಲೀಕರಿಗೂ, ಈ ಸಂಘವು ಕೃತಜ್ಞತೆಯನ್ನು ತೋರಿಸುತ್ತದೆ. ಈ ಸಂಘವು ಅರ್ಪಿಸಿರುವ ಈ ಅಲ್ಪಕಾಣಿಕೆಯನ್ನು ಕನ್ನಡಿಗರು ಅಭಿಮಾನದಿಂದ ಸ್ವೀಕರಿಸಬೇಕೆಂದು ಪ್ರಾರ್ಥಿಸುವ,

ಮಧುಗಿರಿ.
21-4-1935

ಪ್ರಕಾಶಕರು:
**ಕರ್ಣಾಟಕ ಸಂಘ.**

# ಗಣಪತಿ

ಹೊಗಳುವರು ಭಟ್ಟಂಗಿಗಳು ನಿನ
ಗಗಣಿತಾರೋಪಗಳ ಮಾಡುತ
ಹಗರಣದ ಕಾಮುಕರು ನಿನ್ನರಿತವರು ಅವರಲ್ಲ

ಸುಗುಣ ನಿರ್ಗುಣ ರೂಪ ನೀನೈ
ಜಗಕೆ ಮಂಗಳ ಕಾರಿ ನೀನೈ
ಮಗುಳೆ ನಮ್ಮಲಿ ಹೊಳೆವ ತೇಜವೆ! ಹೊರತೆ ನೀಯಮಗೆ

ನೊಂದಿ ಮೈತ್ರಿಯು ತಮದಲಿರುಳಲಿ
ಕಂಪರೆಲ್ಲರು ಕಾದಿ ತಮ್ಮೊಳ
ಗಿಂಪು ನೊಂದಿಹರೆನುತ ಗಣಪನು ಗಿರಿಜೆಯೊಡಗೂಡಿ

ಬಂದು ನಿಂದಿಹ ನಿದುಗೊ! ಹೊಷಿಲಲಿ
ಒಂದುಗೂಡಿಸಿ ನೊಂದ ಕರಗಳ
ಸಂದ ಪ್ರೇಮಾಂಜಲಿಯ ಪುಟದಲಿ ನೀಡಿರರ್ಘ್ಯವನು

ಮಳೆಯ ಕರೆಯಲು ಮೇಘ ಘಟಿಗಳು
ಬಳಲಿತೊಳಲಿಪಧರಣಿ ತಣಿಯಲು
ಹೊಳೆಗಳೇರಲು ನರರು ಹರುಷಿಸೆ! ಪರಿಯನರಿಯದಲೆ

ಎಳೆಯ ಸುಳಿಗಳು ಪೂಗಳರಳಲು
ಇಳೆಯುಕೇದಿಗೆ ಬಿರಿದು ಹೊಗಳಲು
ಸುಳಿದು ಸುಯ್ಯನೆ! ಗಾಳಿಯುಸುರಿತು ಗಣಪ ಬರತಿಹನು

ಬರಹಗಾರರ ಗುರುವು ನೀನೈ
ಹರನ ಸುತ ಚಿರ ವಟುವು ನೀನೈ
ಹಿಂದು ಸೇವೆಯ ಮಾಡಲೆಮಗರಿವಿತ್ತು ಸಲಹುತಿಹರು

ಇರವನಿಡು ಶಿವಸುಖದ ಬೆಳಕಲಿ
ಇರಿದು ಅಂಕುಶದಲ್ಲಿ ಶಂಕೆಯ
ಧರೆಯ ಸುಖಗಳ ಕರಿವೆ ಭಕುತಿಯಲೀವೆ ಮೋದಕವ

ಅರಿತು ನೋಡಲು ನಾಡ ಬಲುಮೆಗೆ
ಹರಿವ ವೀರ್ಯಕೆ ಭಾವಿ ಸೌಖ್ಯಕೆ
ಹರನ ಸುತ ಸ್ವಾತಂತ್ರ್ಯಜೀವಿಗೆ ನೀನೆ ರಕ್ಷಕನು

ಭರತಮಾತೆಯ ಬೆಮರ ಮಣ್ಣೊಳ
ಗುರಿದಮೂರುತಿ ಭರತಗಣಪತಿಯೆ
ಅರಿತುನಿನ್ನನು ಭಜಿಸಿ ನಲಿವೆವು ! ಜಗದ ಜನರೆಲ್ಲ

ನಡುವ ಬಿಗಿಯುವೆ ಪಾಶ ಬಂಧದಿ
ಹಿಡಿವೆನಂಕುಶ ಕೊಲಲು ಶಂಕೆಯ
ಒಡಲ ಕಟ್ಟುವೆ ಪರರ ಸೇವೆಗೆ ಪೊರೆವೆನಾರ್ತರನು

ಹಿಡಿವೆ ಲೇಖನಿ ಬರೆವೆ ಭಾರತ
ದೊಡಲ ಬೇಗೆಯ ಭವ್ಯ ಚರಿತೆಯ
ಒಡೆಯ ! ಗಣಪನ ಮಾಡಲೆನ್ನನು ಘಳಿಗೆಯೊಲವಿನಲಿ

---

# ಯದುಮಣಿಯ ಜನುಮದಿನ

---

ಯಾದವರ ಜೀವಸುಳಿ ಪುರಿಗೆರೆಯು ಮೈಸೂರು
ಆದಿಯಲಿ ತೆಂಕಣಕೆ ಅಂಕಿತವ ನಿಡಲಿಳಿದು
ಮೇದಿನಿಯ ನಾಡಿಸಿದ ನಾಡಿಯಿದು ಬೆಳೆದಿಹುದು ದ್ವಾಪರದಿ ಕಲ್ಕಿಗೆನಲು

ಆದಿಯಿಂ ರಾಜ ಕಂಠೀರವರ ದೇವಚಾ
ಮೋದಧಿಯ ಚಂದ್ರ ಕೃಷ್ಣೇಂದ್ರನೆನೆ ಜ್ಯೋತಿಗಳ
ಮೋದದಲಿ ರಾಜಸಿರಿ ಹಾದಿಯಲಿ ಎಣಿಸಿಹಳು ಮಹಿಷೂರ ನೆನಹಿನಲ್ಲಿ

ದಳವಿ ನ್ನೊಂದರಳುತಲಿದೆ ನೋಡಿರಿ
ತಿಳಿಹೃದಯದ ತೆರೆ ತೆಗೆಯುತಲಿರುವುದು
ಶಿ! ಯಾವವ ಶಕುತಿಯು ದಳವೆದ್ದಿತು! ಈ ದಿನ ಜನುಮದಿನ

ಸುಳಿಸುಳಿ ಕಂಪಿನ ಸುಳಿಯಲಿ ಪ್ರಜೆಗಳು
ಕಳಕಳ ರವದಲಿ ಕೂಡುತ ಹರಿದರು
ಇಳೆಯೊಳು ಹೊಸದಿನ ವೊಂದುರಿಯುತಲಿದೆ ಕಾಂತಿಯ ನೋಡೆನುತ

ವನವನಾಂ ತರದಿಂದ ಹೊರಸೂಸು ತಿರೆಸುರಭಿ
ಘನಪಥದಲತಿಥಿ ಜನ ಮನಮುರಿದು ಸುಳಿಸುಳಿಯೆ
ಸನುಮತದ ಸುಳಿಯಿಡುತ ಚಿರದಿನದ ಗೆಳೆತನವು
ಬಲು ಬಿರಿದು ಸುರಿಯೆ ಮಧುವು

ಮನವರಳಿ ಕಂಪೊಗೆಯೆ ಮಹಿಷೂರ ನಾಡೊಳಗೆ
ಜನುಮದಿನ ಜನವಿದಕೆ! ಜನುಮದಿನ ಯಾದವರ
ಘನಜೋತಿಲತೆಗಿದುವೆ! ಜನುಮದಿನ ವೈಭವಕೆ!
ಜನುಮದಿನ! ಸುಖಶಾಂತಿಗೆ

ಜಗದಲಿ ಕೋಲಾ ಹಲವಿದು ಹೊಳಲಿಡೆ
ಚಿಗುರಲು ಹೊಸದಿನ ವರಳಲು ರವಿಸುಮ
ಬಗೆಬಗೆ ನಿಧಿಗಳ ನೊಗೆದಿಡೆ ಧರಣಿಯು ಕೈಗಾಣಿಕೆಯೆನುತ

ಮಿಗೆಸವಿ ಪುರುಳನು ಪ್ರಜೆಗಳು ತರುತಿರೆ
ಸೊಗೆಯಿಪ ನೆನಹವು ಹಾರುತಬರುತಿರೆ
ಗಗನಕೆ ನೆಗೆದಿತು ಹಳದಿನದಂಚೆಯು ಹೊಸದಿನ ದನಿಗೊಡಲು

ನುಂಗುತಲಿ ಮುಲಗೆದ್ದು ಹಳೆದಿನದ ದುಗುಡಗಳ
ಸಂಗಡಲೆ ಚಿಗಿದೆದ್ದು ಗಂಡಭೇರುಂಡವದು
ಕಂಗಳಿರೆ ಭರವಸೆಯ ಜ್ಯೋತಿಯೆರಡೆನುವಂತೆ ಮೀಯುತಿರೆ ಆಗಸದಲಿ

ಕೆಂಗಿರುಣದಲಿ ಮಿಂದು ಯದುಮಣಿಯ ಮನವಿಂದು
ಸಿಂಗರಿಸಿ ಕೈಬಿಗಿದ ಜನವೃಂದವನು ಬಿಗಿದು
ಕಂಗಳಾಹೊಳಹಿನಲಿ ! ಕಂಬನಿಯ ಸುಡಿಯಿ ! ನವ
ಜೀವಕಾದಿಯಿದು ! ಎನುತ

ಮಂಜುಳ ರವವೇ ಸೆನ್ನುತ ಜಿನ್ನನ
ಕಂಜಗಳರಳಲು ಕೇಶವಗವಿಯಿಂ
ದಂಚುತ ಬರುತಲಿ ಗೊಂದಲ ವೇನೆನೆ ! ಚಂಡಿಯು ನಸುನಗಲು

" ನಂಜಿನ ಕೋರೆಯು ಸಡಲಿವೆಕಾಲಗೆ !
ಅಂಜದಿರಂಜದಿರವಮುಳಿದರೆ ! ನೀ "
ನಂಜನಗೂಡಲಿ ಧೈರ್ಯದ ನುಡಿಬರೆ ಕೊಂಡಿಯು ಸಡಲಿದವು

ದಿನದೇರು ಬಹಮುಂದೆ ಬಿಳಿಗೊಳದ ಕಳಶದಲಿ
ಹನಿಸಿಡುವೆ ಸೈಕತವ ಗೋದೆಯಲಿ ನಾಮಿಂದು
ಮನವಾಜಿಯೇರುತಲಿ ತುಂಬುವೆನು ತುಂಗೆಯಲಿ
ಭದ್ರೆಯಲಿ ಶುಭಜಲವನು

## ಕಂಕಣ.

ವನಪಥವ ಕಾವೇರಿ ಬಿಡುವುದರ ಮುಮ್ಮುಂದೆ
ಹನಿಸಿಡುವೆ ಕಳಶಕ್ಕೆ ! ಶಿರಿಯುಗದ ಜೀವನವ !
ಘನಪಾದವೆರಡನ್ನು ತೊಳೆಯುವೆನು ಬಾ ! ವಿಭುವೆ !
ಕರುನಾಡ ಹೃದಯದಲ್ಲಿ

ನಲಿದೆದ್ದು ಹಂಪೆಯಲಿ ಶಿಖಿಯೆತ್ತಿ ಕೊಳಲನ್ನು
ಜಲ ! ಜೋಗಪಾತ್ರದಲಿ ಜಯಘೋಷ ಮಾಡುತಿರೆ
ತಿಳಿನೆನಹ ಗಂಗರನ ಚಾಲುಕ್ಯ ಹೊಯ್ಸಳರು
ಶುಭದಿನವು ! ಸಾಧುವೆನಲು

ಅಲೆಯೆದ್ದು ತೀರಗಳ ನಪ್ಪುತಲೆ ಬೆಳೆಯಿರೆನೆ
ಕಳಕಳವು ಕಾಳೆಯಿಡಲರಿವಿನಟವಿಯು ದೂರಿ
ಘಳಿರನಿದೊ ! ವೈತಾಳಿ ! ಮಹಿಷೂರಮಂಗಳಕೆ
ಶ್ರೀ ಕೃಷ್ಣ ಏಳೆನುತಿದೆ

---

ವನಪಥನ ಕಾವೇರಿ ಬಿಡುವುದರ ಮುಮ್ಮುಂದೆ
ಹನಿಸಿಡುವೆ ಕಳಶಕ್ಕೆ ! ಶಿರಿಯುಗದ ಜೀವನವ !
ಘನಪಾದವೆರಡನ್ನು ತೊಳೆಯುವೆನು ಬಾ ! ವಿಭುವೆ !
ಕರುನಾಡ ಹೃದಯದಲ್ಲಿ

ನಲಿದೆದ್ದು ಹಂಪೆಯಲಿ ಶಿಖಿಯೆತ್ತಿ ಕೊಳಲನ್ನು
ಜಲ ! ಜೋಗಪಾತ್ರದಲಿ ಜಯಘೋಷ ಮಾಡುತಿರೆ
ತಿಳಿನೆನಹ ಗಂಗರಸ ಚಾಲುಕ್ಯ ಹೊಯ್ಸಳರು
ಶುಭದಿನವು ! ಸಾಧುವೆನಲು

ಅಲೆಯೆದ್ದು ತೀರಗಳ ನಪ್ಪುತಲಿ ಬೆಳೆಯಿರೆನೆ
ಕಳಕಳವು ಕಾಳೆಯಿಡಲರಿವಿನಟವಿಯು ದೂರಿ
ಘಳಿರನಿದೊ ! ವೈತಾಳಿ ! ಮಹಿಷೂರಮಂಗಳಕೆ
ಶ್ರೀ ಕೃಷ್ಣ ಏಳೆನುತಿದೆ

---

# ಕಂಕಣ

---

ತಿರುಗಿದೆನು ಕರುನಾಡ ವರೆಯಿಡುತ ಪೂರವಕೆ
ಉರುಭಯಂಕರವಾಯ್ತು ನಡುಗಿತೆದೆಯುಡುಗಿ ಬಲ
ಪಡುವಲಿನ ಹೊಡೆತದಲಿ
ವಡಲೊಡೆದು ಬೇರೆನಿಸಿ
|| ಸಡಲಿರಲು ಪ್ರೇಮಬಂಧ ||

ಮರುಗಿದೆನು ಹಂಪೆಯಲಿ ಸೊರಗಿದೆನು ಸುಯಿಲಿಡುತ
ಅರಿಯಿರಿದ ರೂಪಗಳ ತಡವರಿಸಿ ತಬ್ಬಿದೆನು
ಮೃಡನಲ್ಲಿ ಬೇಡಿದೆನು
ಬಿಡುಯೆಂದು ಹಣೆಗಣ್ಣ
|| ಸುಡುಯೆಂದು ಸತ್ತಕುರುಹ ||

ತಾಳಿದಾವೇಶಗಳು ಬಾಳಡೆಯೆ ಅಳಿದಿಹುವು
ಬೀಳದಲೆ ತರ್ಪಣದ ಜಲ ಮೊಳೆಯುವುವೆ ಬೀಜ !
ಮೂಜಗದ ಭಂಡಾರ
ಸೋಜಿಗದ ಕರುನಾಡು
|| ಈ ಜಗದ ಚಿತ್ರಭಿತ್ತಿ ||

ಚಾಳೀಸೆ ಕಂಗಳಲಿ ಕಾಣಿಸವೆ ! ಕರುಹುಗಳು
ಸಾಲದೀವಿಗೆಯಿಟ್ಟು ತೋರಣವ ಸಿಂಗರಿಸಿ
ಸೋಗೆಗಂಗಳ ಭಾಗ್ಯ
ಬಾಗಿ ಬಳುಕುತ ಬಹಳು
|| ಈಗಲಿದೊ ಹರಕೆ ಫಲಿಸಿ ||

# ಕಂಕಣ

ಎಣಿಸುತಿದೆ ಹೆಜ್ಜೆಗಳ ಮಹಿಷೂರ ಶಿರವಿನ್ನು
ಚಿಣಿಚಿಣನೆ ಚಿಗಿದೋಡೆ ಧಾರ್ವಾಡ ಹೃದಯವದು
ಉರ್ವಿಯನು ಮೆಟ್ಟುವೆನು
ಓರ್ವನೆನೆ ದಕ್ಷಿಣನು
|| ಮರ್ಮದಲಿನಾಡು ಕರೆಯೆ ||

ಸೆಣಸಲೆನೆ ಭಾರತಿಗೆ ಕರ್ಣಾಟ ಖಡ್ಗವಿದೆ
ಹಣೆಗಿಡಲು ತಿಲಕಕ್ಕೆ ಕರುನಾಡ ಕತ್ತುರಿಯು
ತನ್ನಿರವ ನೋಡಲಿಕೆ ಕನ್ನಡದ ಕನ್ನಡಿಯು
|| ಇನ್ನುಂಟೆ ತಾಯ್ಗೆ ಕೊರತೆ ||

ಶರಧಿಗಳ ಸಂತವಿಸಿ ಹರಿದ ಕಾವ್ಯಗಳೆಲ್ಲಿ
ಚಿರದಿನಕೆ ಬೆಳಕೀವ ಲಾವಣ್ಯರೂಹೆಲ್ಲಿ
ಯಾವಲ್ಲಿ ಅಡಗಿಹವು
ಯಾವಗಿರಿ ಗುಹೆಯಲ್ಲಿ
|| ಭಾವನೆಗೆ ನಿಲುಕದಂತೆ ||

ಕರುನಾಡ ನಡುವಲಿದೆ, ಹೇಮಗಿರಿ ಅಡರದನು
ಹಿರಿಯರೆಮಗಿಟ್ಟಿರುವ ಭಂಡಾರ ನಿಲುಕುವುದು
ಕಂಡವನು ಕೆಳಗಿಳಿದು
ಮಂಡಲಕೆ ಬಿತ್ತಿದರೆ.
|| ಮಂಡಿಗೆಯ ಭೂಮ ಮಹಿಗೆ ||

ಪಾಳೆಯಗಳಲ್ಲಲ್ಲಿ ಅಲೆಯಿಟ್ಟ ನಾಡಲ್ಲಿ
ಏಳಿಗೆಯ ಕಂಪಿಲ್ಲ ಬೆಳವಿಗೆಯ ಸೊಂಪಿಲ್ಲ
ತಿಳಿವಿನಾ ಶಾಂತಿಯಲಿ
ಕೊಳೆಯುವುದು ದಿವ್ಯಛವಿ
|| ಇಳೆಯೆಲ್ಲ ಮೇಳೈಸಲು ||

## ಕಂಕಣ

ಏಳಿರೇಳೇಳಿರಿ ಬೇಲೂರ ಪುತ್ಥಳಿಯ
ಪೌಳಿಯನು ಹಂಪೆಯಲಿ, ತೊಳೆದಿಟ್ಟು ಎಲ್ಲೋರ
ತಿದ್ದಿಟ್ಟು ತಿಳಿರಂಗ
ಹೊತ್ತಿಟ್ಟು ಗೋದೆಯಲಿ
|| ಸುತ್ತಿಸುವ ತೆಪ್ಪೋತ್ಸವ ||

ಕೊಂಕಣರ ಶ್ರೀಘಾಟಿ ಪಡುವಣರ ಪದ ಸರಣಿ
ತೆಂಕಣರ ನಯನೀತಿ ನಡುವಣರ ಜೀವಕಳೆ
ಬೆಳೆಯಲಿದು ಕರುನಾಡು
ಬೆಳೆಸಿಡುವ ಗುಟ್ಟೆದುವೆ
|| ತಿಳಿದವರು ಕಂಡತೆರನು ||

ಬಹುದಿನದ ಕಾಂತಿಯಿದೆ ಶ್ರೀ ಕೃಷ್ಣ ರೂಪದಲಿ
ವಹಿಸಿರಿದ ಹೃದಯದಲಿ ಬೆಳೆವಹಿಯ ಸಜ್ಜೆಯಲಿ
ಬಾಳುವಿರಿ ಬಲು ದಿನದ
ಏಳಿಗೆಯ ಸೊಡರುರಿದು
|| ಕೇಳಿರಿದು ಬೆಳೆವ ಗುಟ್ಟು ||

ಮುಂದಿನಾ ಮಧು ಯುಗವು ಮೊಗ್ಗಿನೊಳಗಡಗಿಹುದು
ಮುಂದದನು ಆಳುವರು ನಿಮ್ಮೊಳಗೆ ಜನಿಸುವರು
ಬೊಮ್ಮ ವರ್ತನೆಯಲ್ಲಿ
ಮುಮ್ಮೊದಲು ಬೆಳೆದಿಹರು
|| ನಿಮ್ಮವರು ಹಿರಿಯರೆಲ್ಲ ||

ಒಂದಾಗಿರೊಂದಾಗಿ ಕಂಕಣದ ಬಂಧದಲಿ
ಒಂದಾಗಿ ಮುಂದಿರುತ ವಿಶ್ವಕರ್ಣಾಟಕ
ವಿಶ್ವಾಸದಾರತಿಯ
ವಿಶ್ವಕೆನಲೆತ್ತಲಿದು
|| ಶ್ರೀ ವಿಶ್ವಕರ್ಣಾಟಕ ||

# ಉಘೇ

---

ಉಘೇ ಉಘೇ ಉಘೇ
ಹಿಂದು ದೇಶ ಹಿಂದು ಹೃದಯ
ಸಿಂಧು ಗೋದೆ ಗಂಗೆಯು
ಅಂದಿಗಿಂದಿಗೆಲ್ಲ ಒಂದೆ
ಹಿಂದು ಜನ ಸ್ವತಂತ್ರರು
ಉಘೇ ಉಘೇ ಉಘೇ

ಮುಳಿಗಿ ಸೂರ್ಯ ಬೆಳಗಿ ಸೂರ್ಯ
ಮುಳುಗಿ ಪರರು ಮೇಗಡೆ
ಕಳೆದು ನನ್ನ ನಿನ್ನ ಬಂಧ
ತಿಳಿಯೊ ನಾವ್ ಸ್ವತಂತ್ರರು

ಸಾಗಿ ವರ್ಷ ಮಾಗಿ ಪುಣ್ಯ
ಸಾಗಿ ಬಂತು ಸುಗ್ಗಿಯು
ತ್ಯಾಗದಲ್ಲಿ ರಕ್ತರಾಗಿ
ಈಗ ಬೀರಿ ನಗುವನು
ಉಘೇ ಉಘೇ ಉಘೇ

ಸೋಸಿ ಸಪ್ತ ಲೋಕದಿತಿ
ಹಾಸವೆಲ್ಲ ನೋಡಿರಿ
ಸಾಸಿ ಎನಿಸಿ ಬಾಳಿ ಬದುಕಿ
ಈ ಸ್ವತಂತ್ರದಿರವಲಿ
ಉಘೇ ಉಘೇ ಉಘೇ

# ಕನ್ನಡಿ

---

ಕಳವಳವು ಕನಸಿಂದ ಬೆಳಗಾಗಿ ಬಲುಕಾಲ
ಕಳೆದು ಹೋಯ್ತೆನುತಾಗ ತಿಳಿವಿನಾ ರಾಣಿತಾ
ನಿಳಿದು ಮಂಚವ ಬೇಗ ತಿಳಿನೀರ ಮಿಂದೆದ್ದು
ಬಿಳಿ ಮಡಿಯ ಶೆಳೆದುಡುತಲೆ

ತರಣಿಗರ್ಘ್ಯವನಿತ್ತು ಅರಿವಿನಾರಾಣಿ ಜಪ
ಸರವ ಪಿಡಿದಾಗ ಕುಳಿತಿರುತಲರ ಘಳಿಗೆಯುರು
ತರದ ಶಾಂತಿಯು ಸವಿದು ತೆರೆದು ಕಂಗಳ ದೇವಿ
ಸರಸತಿಯು ನಸು ನಗುತಲೆ

ಪದುಮ ಪೀಠವನಿಳಿದು ಇದುಗೊ ಸಿಂಗರವಾಗಿ
ಮುದದಿ ಮನದಿನಿಯನಡಿಗೆರಗಿ ಬರುವೆ
ಹದಿನೆಂಟು ಶತಮಾನ ಪುದಿದ ದುಮ್ಮಾನದಲಿ
ಮುದ ಹಾಸವರಿಯದಲೆ ಕೊರಗಿ ಕುಳಿತೆ

ಗುಜರಾತ ಗಗ್ಗರವು ಪದಪದಕೆ ಧನಿಗೊಡಲು
ಗಜಬಜೆಯ ಮಗುವಂತೆ ಮುದವಿಟ್ಟು ಅನುಸರಿಸಿ
ವಿಜಯ ವಂಗದ ಶಂಖದಂದವಹ ಚೂಡಿಗಳು
ಕಿಂಕಿಣಿಸೆ ಧನಿಗೈಯುತ

ಭಾರತಿಯು ಬಲು ಮಧುರ ಹಾವ ಭಾವಗಳನ್ನು
ತೋರಿ ನಲಿದೊಲಿಯೆ ಮಾರರವದಿಂಪಿನಲಿ
ಪೂರವದ ನೆನಹೆಂಬ ಹಿರಿಶೆರಗಿನಂಬರವ
ನಿರಿ ಹಿಡಿದು ತಾನುಟ್ಟಳು

ಸಂಸ್ಕೃತದ ಕಾಂಚಿಯು ! ಹೊಳೆವ ಗೆಜ್ಜೆಗಳಲುಗೆ
ಝೇಂಕರಿಸೆ ಜಯಕೆನುತ ಬಳೆಗಗ್ಗರಗಳೆಲ್ಲ
ಬಿಂಕದಲಿ ಗಂಟಿಕ್ಕಿ ರಸಗಬ್ಬ ಕುಪ್ಪುಸವ
ಬಿಗಿಯು ಹಳದೆನುತ ನಗುತ !

ಅಂದವಿದು ಕುಂಕುಮವು ಹಿಂದಿಯಾ ನವ ರಾಗ
ದಿಂದ ಕೂಡಿಹುದೆನುತ ಒಂದು ಬೆರಳಲಿ ತೀದು
ಎಂದಿನಾ ನೆಪ್ಪಿನಲಿ ಹಣೆಗಿಟ್ಟಳವಸರದಿ
ಬಳಿಕ ತಿದ್ದುವೆನೆನ್ನುತ.

ಮಹರಾಷ್ಟ್ರ ಮುಖುರವದು ಬಿಗಿದ ಮುತ್ತುಗಳಿಂದ
ಗಹಗಹಿಸಿ ಯಲುಗುತ್ತ ದೇವಿ ನಗಲು ! ನಗಲು !
ಬಹು ಕೆಂಪಿನಾಪ್ರೋಲೆ ತೆನುಗನ್ನು ಜೋಲುತಲಿ
ಮಿನುಗಿ ಮೃಗಶಿರನ ಹಳಿಯೆ !

ತಮಿಳು ಕಂಠಿಯು ಕೀಲನಮಿತ ಪ್ರೇಮದಲೊತ್ತಿ
ರಮಣಿ ಯುಳಿದಾಭರಣಗಳ ಧರಿಸೆ
ಉಡಿಗೆ ತೊಡಿಗೆಗಳೆಲ್ಲ ಪಡೆಯುತಿರೆ ತಿಳಿ ಹೊಳಪ
ಸಿರಿ ಮೈಯ ತೇಜದಿಂದ

ಸಿಂಗರವು ಮುಗಿಯಿತಿದು ಮುಂಬೆಳಗಿ ಬೆಳೆಯುತಿದೆ
ಅಂಗಾಂಗಳ ಕಾಂತಿ! ಇಂಬಾಯ್ತು ಉಡಿಗೆ ತೊಡಿಗೆ !
ಸಂಗಡಲೆ ತಿದ್ದುವೆನು ತಿಲಕವನು ಎನ್ನುತಲಿ
ಅರಸಿ ! ರನ್ನ ಗನ್ನಡಿಯು !

ಬಲುದಿನದ ರತುನವಿದು ಚಿರಕಾಲವಾಯ್ತಿದನು
ತೆರೆದು ನೋಡಿಲ್ಲೆಂದು ಒಲಿದು ನೋಡುತ ರಮ್ಯೆ !
ಒರೆಸಿದಳು ಶರಗಲ್ಲಿ ಅಬ್ಬಬ್ಬ ಬಲುಮಂಕು
ಮೊಬ್ಬಾಯ್ತು ಎನುತೆನುತಲೆ !

# ಕಂಕಣ

ಶರಗೆಳೆದು ಭಾರತಿಯು
ಒರೆಸುತ್ತ ನೋಡುತ್ತ
ಸಿರಿಗನಡಿ ಏತಕಿದು ಒಲಿಯದಿಹುದು !
ವರಪತ್ರಿಯು ಕಾಣಲಿಹೆ
ಸರಿಇಲ್ಲ ! ಇದು ತಿಲಕ !
ಸಿರಿಗನಡ ವದನವನು ತೋರದಿಹುದು

ಚಿರದಿನದ ರತುನವಿದು
ಸಿರಿಗನಡ ಕನಡಿಯಿದು !
ಶರಗೆಳೆದು ಭಾರತಿಯು
ಒರೆಸುತ್ತ ನೋಡುತ್ತ !
ಸಿರಿಗನಡಿ! ಏತಕಿದು
ಮೊಗಛವಿಯ ತೋರದೆನುತ
ಹಿರಿಹೊಲಸ ನೊರಸುತ್ತ
ಮರುಗುತ್ತಿಹಳು !
ಮರು ಮರುಗುತ್ತಿಹಳು !

---

ಕಿಡಿಯೊಂದನಡಗಿಸೆ ನುಡಿಬಲಿ ಕೂಡಿ ಕಿ
ಗುಡುಗಾಡಿ ಜಗವೆಲ್ಲ ಸುತ್ತಿತು ಹಾಡು
ಸಿಡಿಯುತ ನುಡಿಗಳು ಸುಳಿರಾಗವುಗುಳಿ ಡಿ
ಒಡಲುರಿಯೆಂದಿತು ಧರಣಿಯು ಹೊರಳಿ
ಚಿಗಿಯಿತಿದಾಶೆಯ ಕಿಚ್ಚಿದು ಕಿಚ್ಚು
ಚಿಗಿಯಿತು ಕವಿಮನದಾಶೆಯ ಕಿಚ್ಚು

ಇನ್ನೊಂದು ಕಿಡಿಯಿಟ್ಟೆ ರೇಖೆ ಬಣ್ಣದಲಿ
ಮುನ್ನದ ಮೋಹಿಸಿ ಮಹಿಯು ಮೈ ಮರೆಯೆ
ವಹ್ನಿ ರೂಪೋತ್ಕರ ಜ್ವಾಲೆಯು ಹರಿಯೆ
ಎನ್ನೊಡಲಾಶೆಯು ದಹಿಸಿತು ಧರೆಯ
ಚಿಗಿಯಿತಿದಾಶೆಯು ಕಿಚ್ಚಿದು ಕಿಚ್ಚು !
ಸೊಗಸಿತು ಕಿಚ್ಚಿದು ! ಕಿಡಿಗಳು ಹೆಚ್ಚು !

ಮತ್ತೊಂದ ಸೆರೆಯಿಟ್ಟೆ ಕರಿಗಲ್ಲಿನಲ್ಲಿ
ಒತ್ತುವ ತೇಜ ತಥಾಗತ ಮೂರ್ತಿ !
ಮುತ್ತುತ ಜನ ಬಂದು ಮಣಿದರು ! ಅಲ್ಲಿ
ಹತ್ತೊಂದು ಹೃದಯುವನಾಳಿತು ಮೂರ್ತಿ !
ಚಿಗಿ, ಚಿಗಿ, ಚಿಗಿಯಿತು ಕವಿಮನದಾಶೆ !
ಚಿಗಿಯುತ ಸುಳಿಯಿತು ಧರಣಿಯ ಸೋಸಿ

ಅಂಡ ಪಿಂಡಾಂಡವನೆನ್ನೊಳು ಕಂಡೆ
ಕಂಡೆನು ತಾಂಡವ ಲಾಸ್ಯವ ಕಂಡೆ !
ನಿಂದೆನು ಕಾಲಪ್ರವಾಹವ ದಾಂಟಿ
ಇಂದು ನಾನಾಗಿಹೆ ಭುವನಕೆ ನೆಂಟ
ಚಿಗಿಯಿತು ಕವಿಮನದಾಶೆಯು ಗುಟ್ಟು
ಸೊಗಸುವ ಕಾಂತಿಯ ಧರಣಿಗೆ ಕೊಟ್ಟು !

# ಪಂಡಿತ

---

ಫಣೆಗೆ ಚಂದಿರ ರೇಖೆ
ಆಣೆಯಾಗಿ ತಿದ್ದಿಟ್ಟು !
ಮಣಿರಮಣಿ ತಾರೆಯೊಲು
ಮಿಣುಗು ದೀಪವನಿಟ್ಟು
ಕ್ಷಣಗಳನು ವರಸತಿಯು
ಎಣಿಸುತಲಿ ಕುಳಿತಿರಲು !

× × × × ×

ಘನ ಘನೋಪಾಧಿಗಳ !
ತನ ಬುದ್ಧಿಯಿಂ ಪಡೆದ
ಘನಶ್ರೇಷ್ಠ ಪಂಡಿತನು
ತನಿಗಬ್ಬ ! ಓದುತಲಿ !
ಮಣಿ ರಶಿಕಮಣಿಯುವನು
ಮನವತಾ ಮರೆತಿಹನು !
ಮನವತಾ ಮರೆತಿಹನು !

---

# ಮೂರ್ಛೆ ಬಂದಿತ್ತು

ಮೂರ್ಛೆ ಬಂದಿತ್ತು !
ಮೂರ್ಛೆ ಬಂದಿತ್ತು !
ಕಾಂಪ್ರೋಂಡು ಬಂಗ್ಲಿ
ಕಂಕಮ್ಮಂಗೆ
ಮೂರ್ಛೆ ಬಂಧಿತ್ತು

ಮದಿವೊ ಏನೋ ಆಗುತಿತ್ತಂತೆ
ಚಪ್ಪರ ಕಂಬ ವರಗಿದ್ದರಂತೆ
ಮದವಣಗನ್ನೇ ನೋಡುತಿದ್ದರಂತೆ
ಯಾಕೋ ಏನೋ ಬಂದವರಂತೆ
ಯಾರೋ ಏನೋ ಉಸಿರಿದರಂತೆ
ಕೂತಿದ್ದ ಹಾಗೇ ಕನಕಂನೋರು
ಇದ್ದಿದ್ದ ಹಾಗೇ ನಿಟ್ಟುಸಿರಿಟ್ಟು
ಕಂಬ ಬಿಟ್ಟು ಜಾರಿದರಂತೆ
ಕಂಕಂಮ್ಮ
ಕಾಂಪ್ರೋಂಡು ಬಂಗ್ಲಿ ಕಂಕಂಮ್ಮ

ಏಕಾ ಏಕೀ ಉಸಿರೇ ನಿಂತು
ಉರುಡಿದರಂತೆ ಎಚ್ಚರ ತಪ್ಪಿ
ಯಾರಾರೆಲ್ಲ ಕೂಗಿದರಂತೆ
ಹೆಸರೇ ಹಿಡಿದು ಅರಚಿದರಂತೆ
ಏನೇನೆಲ್ಲ ಮಾಡಿದರಂತೆ
ಎಚ್ಚರ ತಪ್ಪಿ ಅರಿವೇ ಇಲ್ಲ

ಚಪ್ಪರವೆಲ್ಲಾ ಚಾಮರ ಬೀಸೆ
ಮೂರ್ಛೆ ಬಂದಿತ್ತು
ಕನಕಮ್ಮಂಗೆ
ಮೂರ್ಛೆ ಬಂದಿತ್ತು

ಆಕಾಶಪುರದ ಅಜ್ಜೋಯ್ಯಪ್ಪ
ಎಲ್ಲಿಂದೆಲ್ಲೊ ಓಡೋಡಿ ಬಂದು
ಯಾಕೆ ? ಏನು ? ಯಾರು ? ಎತ್ತ ?
ಎಂದು ಬಂದು ಹಿಡಿದು ಎತ್ತಿ
ಮೆತ್ತನ್ನೇಯ ಕುರ್ಚಿಲಿಟ್ಟು
ಬೆಚ್ಚನ್ನೇಯ ಕಾಫಿ ಕುಡಿಸಿ
ಪನ್ನೀರೆರಚಿ ಗಾಳಿಹಾಕಿ
ಯಾಕೇ ಕನಕ
ಏನಾಯ್ತಮ್ಮ ?
ಎಂದುನಿಂದು
ನುಡಿಸಿದರಾಗ !

ತೆಗೆದು ಉಸಿರ
ಹಚ್ಚಿದೃಷ್ಟಿ
ಕಂಗಳ ತುಂಬಿ
ಬಿಕ್ಕಳಿಸುತ್ತ
ಹೇಳಿದರಾಗ ಕನಕಮ್ಮ
ಎಚ್ಚರ ಬಂದು ಕನಕಮ್ಮ
ಮೂರ್ಛೆ ತಿಳಿದು ಕನಕಮ್ಮ
ಜ್ಞಾನ ನಿಂದು ಕನಕಮ್ಮ
ಕಾಂಪೊಂಡು ಬಂಗ್ಲಿ
ಕಂಕಂಮ್ಮ

ನಾನಂತೆ ಮುದುಕಿ
ಕೆಣಕತಾರೆ ಕೆದಕಿ
ಚಾಳೀಸೆಲ್ಲಾ ಪೋಕೀಗಂತೆ
ಗಲ್ಲಗಳೆರಡೂ ಸುಕ್ಕಿವೆಯಂತೆ
ಇದ್ದಲ್ಲೆಲ್ಲ ಬಿದ್ದಿವೆಯಂತೆ
ಇದ್ದದ್ದೆಲ್ಲ ಬದ್ಧಲ್ಲಂತೆ
ನಾನಂತೆ ಮುದುಕಿ
ಕೆಣಕತಾರೆ ಕೆದಕಿ
ಹೇಡೀ ಕೂಡೀ ಕಾಷೀ ಬೇಡೀ
ಮೋಡೀ ಆಡೀ ಭೋಡೀ ಮಾಡೀ
ಚಾಡೀ ಹಾಡಿದ ರೂಢೀ ಕೇಡೀ
ನಾನಂತೇ
ಕೆಣಕತಾರೆ ಕೆದಕಿ
ನಾನಂತೆ ಮುದುಕೀ

ನಕ್ಕರು ಕೆಲವರು
ಅತ್ತರು ಕೆಲವರು
ಎಲ್ಲವರೆಂದರು
ಅಯ್ಯೋ ಪಾಪ
ಅಯ್ಯೋ ಪಾಪ !

## ಸಂತಂಮಣ್ಣ

ಕಲ್ಯಾಣಸೇವೆ ಜೇಬಿನ ಬುಡದಲಿ
ಪುಟ್ಟಾಣಿ ಪುರಿಯು ಮೇಲೊಂದಷ್ಟು
ಗೋಲೀ ಬಳಪ ಮತ್ತೊಂದಿಷ್ಟು
ಬಂದ ಬಂದ ಸಣ್ಣ ತಮ್ಮಣ್ಣ

ಪಟಾಸು ಪೆಟ್ಲು ಒಳ ಜೇಬಲ್ಲಿ
ಕಾಸಿನ ನಾಲು ಕಳ್ಳ ಜೇಬಲ್ಲಿ
ಚಂಡು ದಾಂಡು ಎಡ ಬಲದಲ್ಲಿ
ಬಂದ ಬಂದ ಸಂತಂಮಂಣ್ಣ

ಅಮ್ಮನ ಹಾರ ಉಬ್ಬಿದ ಎದೆಗೆ
ಬಿದಿರಿನ ಕೊಳಲು ಗೆಜ್ಜೆಯ ವಳಗೆ
ಹದ್ದಿನ ರೆಕ್ಕೆ ಎತ್ತಿದ ತಲೆಗೆ
ಬಂದ ಬಂದ ಸಣ್ಣ ತಮ್ಮಣ್ಣ

ಕಸ್ತೂರಿ ಚಂದ್ರ ಹಣೆಯಲ್ಲಿಹುದು
ಸಂಜೆಯ ಶುಕ್ರ ಕಣ್ಣಲ್ಲಿಹುದು
ಬೆಳು ಬೆಳ್ದಿಂಗಳು ಗಲ್ಲದ ಮೇಲೆ
ಬಂದ ಬಂದ ಸಂತಂಮಂಣ

ಮೊದಲನೆ ಮಾತು ಹೂವಿನ ಮುತ್ತು
ಮರು ಮಾತಾಡಲು ಸಿಡುಲು ಗುಡುಗು
ಮೂರನೆ ಬಾರಿಗೆ ಆಣಿಕಲ್ಮಳೆಯು
ಬಂದ ಬಂದ ಸಂತಂಮ್ಮಣ್ಣ

ಬಾರೋ ಬಾರೋ ಸಿಡಿಲಿನ ಮರಿಯೆ
ಬಾರೋ ನಾಡಿನ ಸುಂಟರ ಗಾಳಿ
ತೋರೋ ಸಿರಿಮೊಗ ತುಂಟರ ಗುರುವೆ
ಬಂದ ಬಂದ ಸಣ್ಣ ತಮ್ಮಣ್ಣ

# ಹೊಳಲು

---

ಚಂದಿರನು ನಡುಗಗನ ಪೊಂದಿರಲು ಮೌಕ್ತಿಕದ
ಅಂದಣವದೆತ್ತಿರಲು ಅಂದವೆನೆ ಪರರೆಲ್ಲ
ಹಿಂದಣಾ ದಿನಕಿಂತ ಸಂಧಿಸಿದ ಈ ರಜನಿ
ಭಾರತದಿ ಬಂತು ಹೊಳಲು

ಚಂದಿರನು ತಂಬೆಳಕ ನಗುವಿಡಲು ಅಪಹಾಸ
ದಂದಣವನೆತ್ತಿರಲು ಲಗುಬಿಗಿಯ ಪರರಾಳು
ಮಂದಿಗಳು ತಿಳಿದೇಳಲಗೊ ! ಯೋಗಿ ಕರೆಯುತಿರೆ
ಬಾರೆನುತ ಬಂತು ಹೊಳಲು

ಕೀಳಕೀಳಲಿ ಪುಟ್ಟಿ ಮೇಲೆ ಮೇಲೇರುತಲಿ
ಆಳುತಲಿ ಜನಮನವ ಶೂಲಕೊಡ್ಡುತ ಸುರಿಸಿ
ಬಾಳ ಜೀವನ ಜಲವನಾಲಿಯರಿಯದಲಳಿಯೆ
ಜನರಿಳಿದು ಬಂದ ಹೊಳಲು

ಕಾಳು ಕಡ್ಡಿಯ ತೂರಿ ಮೇಲೆ ಮೇಲ್ಬಾರಿಸುತ
ನಾಳಿನಾ ನವಯುಗಕೆ ಮೇಲೆನಿಪ ಬೀಜಗಳ
ಹೂಳುವರು ಬರಲಾಗಿ ಕಾಲ ಬಂದಿದೆಯೆನುತ
ಜನಜನದ ನುಡಿಯ ಹೊಳಲು

ಇದು ವಹ್ನಿಗಿರಿ ಇದುವೆ ಮಳೆವಹ್ನಿ ಹೊಳೆವಹ್ನಿ !
ಇದುವುಕ್ಕಿ ಧರೆಯೆಲ್ಲ ತಳಮಳಿಸಿ ನಡುಗುತಿದೆ
ಅದೊ ! ಸೊಕ್ಕಿದಾಭಾವ ! ತಳಹದಿಯು ಕುಸಿಬಿತ್ತು !
ಮರಳುತಿಹ ಯುಗದ ಹೊಳಲು

ಇದು ಸಿಡಿಲು ಕಾರ್ಮೋಡ ಪ್ರಳಯ ಜಲಧಾರೆಯಿವು
ಇದು ಝುರಿಯ ಜಲಧಾರೆ ಇಳಿಗಿಳಿವ ದೇವನದಿ !
ಅದೋ ! ವಹ್ನಿಕಬ್ಬೊಗೆಯು ಅಳಿದವಿವು ಸಿಡಿದವವು
ಚರಕದರೆ ತಿರುಗೆ ! ಹೊಳಲು

ವಿಷಘಳಿಗೆ ಪರಜನಕೆ ಮಧುಯೋಗ ಭಾರತಕೆ
ಹಸಿದು ಶಂಕರಿ ನಿಲ್ಲಲದು ಪ್ರಲಯ ಪರಜನಕೆ
ಬಸಿಯಲಂಧಕ ರುಧಿರವದು ನೆಲಕೆ ಶ್ರೀ ಶಾಂತಿ
ಎನುತೆನುವ ನರರ ಹೊಳಲು

ಹಸುಳೆಯಂದದಿ ನಕ್ಕು ಮಧುರ ಭಾವವ ಬೀರಿ
ಹೊಸತೆರನ ಜಿಹ್ವೆಯಲಿ ಸುಧೆಯ ಜಾಹ್ನವಿಯುದಿಸೆ
ಹೊಸಯುಗದ ಗಂಧವಹನಿದೊ ಗಾಂಧಿ ಏಳುತಿಹ
ಎನುತೆನುವ ನಾಡ ! ಹೊಳಲು

ಅಲ್ಲೋಲ ಕಲ್ಲೋಲ ಉದಧಿಗಳು ಎಚ್ಚೆತ್ತು !
ಎಲ್ಲೆಲ್ಲು ಸಲ್ಲಾಪ ಕುದಿವ ಮನದಾಶಯದ
ಹೊಲ್ಲೆಹದ ಸುಳಿವಿರದ ! ಮಧುಯುಗವು ಮರಳುತಿರೆ
ಉಲ್ಲಾಸದೊರೆಯ ಹೊಳಲು

---

ದ್ವಾರ ತೋರಣಾದಿಯಿಲ್ಲ
ಬಿಜಯಿಸ್ಯೆ ! ಅತಿಥಿಯೆ !
ದ್ವಾರ ದರ್ಪಣಾದಿಯಲ್ಲಿ
ಬಿಜಯಿಸ್ಯೆ ಪಥಿಕನೆ

ಸಾಗಿ ಮುಂದೆ ನೀಡುಅಲ್ಲ
ಅತ್ತಲಲ್ಲಿ ಕರಗಳ !
ರಾಗಿಣಿಯರು ಬಂದರಲ್ಲಿ
ಮತ್ತಕಾಶಿನಿಯರು!

ಇಲ್ಲಿ ಸಾಲಗೊಂಬೆ ನೋಡು
ನೋಡು ಕೈಸಾಲೆಯು !
ಇಲ್ಲಿ ಏರುಗಲ್ಲ ರಾಜಿ
ನೋಡು ವೈಭೋಗವ !

ಭೋಗ ಸಾಧ್ಯ ಸ್ವಪ್ನ ಸುಧೆಯ
ದೆಂದೆಯಾ ಈ ದಿನ
ಯೋಗ ಸಾಧ್ಯವೆಂಬ ರೂಪಿ
ವೆಂದೆಯಾ ! ಈ ದಿನ !

ಏಳುನೆಲೆಯ ಶಿರಿಯನಲ್ಲಿ
ಶೀಲನೀ ಕಂಡೆಯು
ಭಾಳವುಂಡು ದಣಿದೆನೆಂದು
ಲೋಲನೀನೆಂದೆಯು !

ಇಷ್ಟು ರೂಪು ನೋಡಿ ದಿಟ್ಟಿ
ನೊಂದುದೇ ನೆಂಬೆಯು
ಇಷ್ಟ ದೈವ ! ಕಾಣಲಿಲ್ಲ !
ವೆಂದಿತೇ ಹೃದಯವು !

# ಶಿಲ್ಪಿ

---

ಕೆಂಪು ವಜ್ರ ನೀಲ ಪುಷ್ಯ
ರಾಗ ವೈಡೂರ್ಯವು
ಚಂಪರಾಗ ಚಂದ್ರಕಾಂತ
ನಾಗ ಗೋಮೇಧಿಕ

ಇಂತು ನೋಡಿ ಒಡೆದು ಕಡೆದು
ತಿಕ್ಕಿ ನಾಸಿಕ್ಕಿದೆ
ಚಿಂತೆಯಲ್ಲಿ ಸಾಣೆಯಿಟ್ಟು
ಮಿಕ್ಕುವನ್ನಿಕ್ಕಿದೆ

ಇಡಲು ಕಳಸ ಗೋಪುರಾದಿ
ರತುನ ಮಂದಿರಕೆನೆ
ನುಡಿಯ ಗಣಿಗಳಿಂದ ತೆಗೆದೆ
ರತುನ ಗಲ್ಲೆಂಬಿವ

ಹೂಡಿ ನೋಡಿ ತೋರಣಾದಿ
ಅಕ್ಷರಾಲಯಕೆನೆ
ಜೋಡಿಸಿಹೆನು ರೂಢಿಯೊಳಗೆ
ಅಕ್ಷರಾಲಯವಿದ

ಕಣ್ಣಿವೆಂದು ಉಣ್ಣದಂಥ
ರೂಪ ಸೌಂದರ್ಯವು !
ಅಣ್ಣ ಕೇಳು ಹೊಳೆದವಿಲ್ಲಿ
ರೂಪ ರಾಗಾದಿಯು

ಕಾಣಲಿಲ್ಲ ಕಾಂತೆಯನ್ನು
ಕಾಂತೆಯಿಲ್ಲೆಂದಿತೆ ?
ಜಾಣ ತಿರುಗು ವಳಗೆ ನೋಡು
ಕ್ಲಾಂತ ! ನೀ ಮುಂಗಡೆ.

ಬಿಗಿದು ಆಶೆ ಬಿಗಿದು ಊಹೆ
ಮುಗುದ ! ಮೆಲ್ಲನಡಿಯಿಡು
ಮುಗಿಲಿನಂತೆ ತೆರೆಯು ಕಡೆಗೆ
ಮುಗುದ ! ಮೆಲ್ಲನಡಿಯಿಡು.

ಏಳು ಹೊಸಿಲ ದಾಟ ಬೇಕು
ಏಳು ತೆರೆಯ ಹಾರಿಸಿ
ಏಳು ವರಣ ಜೋತಿ ರಾಜಿ
ಏಳ ನೀ ದಾಟುವೆ.

ತೆರೆಯು ಶೆಳೆದು ನೋಡು ವಳಗೆ
ಇರುವ ಮೂರ್ತಿ ಯಾವುದು ?
ಶಿರಿನಿಕೇತನಕ್ಕೆ ಈಕೆ
ಅರಿಯೆ ನೀ ರಾಣಿಯು !

ಬಲ್ಲೆ ಬಲ್ಲೆ ! ನೀನು ಇವಳ
ಬಲ್ಲೆಯೈಯ್ಯ ! ಅತಿಥಿಯೆ !
ಚಲ್ಪ ರೂಹ ತೇಜದಲ್ಲಿ
ಎಲ್ಲೊ ನೀ ಮಿಂದಿಹೆ.

ಇದುವೆ ಪದುಮವನ್ನು ಹುಡಕಿ
ಭ್ರಮರ ಕೋರಿಕೆಗಳು
ಚದುರ ! ತಿರುಗಿ ಯೇಳು ಲೋಕ
ಅಮುಮ ! ಹಿಂದಿಗುಗಿವೆ.

ಹೃದಯ ರಮೆಯನದಯಳಿಂದು
ವಿರಹಿ ನೀ ನೊಂದೆಯ ?
ಚದುರೆಯನ್ನು ವಿರಹ ಮನವು
ಅರಸಿ ಕಾಣದಿದ್ದಿತೇ ?

ನೀನು ಕಂಡು ಭ್ರಮಿಸಿ ಪೋದ
ನಾಳಿಯೆಂಬಾದಿನ
ರಾಣಿ ! ನಿನ್ನ ಧ್ಯಾನದಲ್ಲಿ
ಭಾಳ ವ್ಯೆಮರೆತಿರೆ

ಚಂಡಬಲರು ದೈತ್ಯ ಸುತರು
ದೂರ ನೀರವರಿಂ !
ಕಂಡು ಕೆಳೆದು ಪೊಯ್ದು ರವಳ
ನೀರು ಯೋಳ ರಾಚಿಗೆ !

ರಸಿಕ ! ನಿನ್ನನೆನಹಿನಲ್ಲಿ ಕನಲುತಿರ್ದೀ ಕೆಯ
ಸಸಿಯ ಮೊಗವ ಕಂಡೆನೊಮ್ಮೆ ಕನಸ ಸಂಚರಿಯಲಿ.

ಕಮಲ ನಾಳ ದೊಳಗೆ ಯಿಳಿದು ಕಂಡೆ ನಾ ಶೆರೆಮನೆ.
ರಮಣಿ ಇವಳ ಬಿಡಿಸಿತಂದೆ ಪುಂಡರಂ ಖಂಡ್ರಿಸಿ.

ನುಡಿಯ ಲಲಿತ ಗೃಹವ ಕಟ್ಟೆ ಕುವರಿಯನ್ನಿಟ್ಟೆನು.
ಒಡನೆ ಛಲವ ಹಿಡಿದವಳವಳು ಅವನ ತೋರೆನುತಲಿ !

ರತುನ ದ್ವಾರ ಮುಚ್ಚದಿಹುದು ಸತತ ರಾಗಿಣಿಯರು
ಪಥಿಕ ! ರಸಿಕ ! ಬರುವನೆಂದು ಸತತ ಕಾದಿರುವರು !

# ಸುಗ್ಗಿಯ ಕುಣಿತದ ಕೋಲಾಟ

---

ಟಗರನು ಕೂಡಲು ಗೂಳಿಯು ಬಂದು
ಚಿಗುರಿದ ಬೇವಿಗೆ ಬೆಲ್ಲವು ಸಂದು
ಸಾಗಿತು ಕರಗವು ಕಬ್ಬಿನ ಗಾಣ
ಈಗೀಗ ಹೊರಟಿವೆ ಹುವ್ವಿನ ಕಂಪು
ಭುಯ್ಯೋ, ಭುಯ್ಯೋ, ಭಂಭರ ಭುಯ್ಯೋ
|| ಹುಯ್ಯೋ, ಹುಯ್ಯೋ, ಹುವ್ವಿನ ಕೋಲ ||

ಅವಳಿಯ ಕೂಟವ ನಳ್ಳಿಯು ನೋಡೆ
ಜವದೊಳು ಬಂದಿತು ವಡ್ಡಂತಿಯೂಟ
ಧಾವತಿಯಿತ್ತವು ಬಿತ್ತನೆ ಬೇಗೆ
ಭಾವಿಸಿ ಬಂದಿತು ಮುಂಗಾರ ಮಿಂಚು
ಹುಯ್ಯೋ, ಹುಯ್ಯೋ, ವಾನಕ ಮಜ್ಜಿಗೆ
|| ಹುಯ್ಯೋ, ಹುಯ್ಯೋ, ಗಂಗೆಯ ಕೋಲ ||

ಓಡಲು ಅಂಗನೆ ಸಿಂಗನ ಮುಂದೆ
ಆಡಲು ಅಂಗಳದೆಲ್ಲೆಲ್ಲ ಗಂಗೆ
ಕಾಡಿಸೆ ಪಡುವಣ ಮೋಡವ ಸಿಡಿಲು
ಆಡಿತು ಭಾದ್ರದ ಮುಡಿಯೆಲ್ಲ ಸಡಲಿ
ಸುಯ್ಯೋ, ಸುಯ್ಯೋ, ಜಡಿಮಳೆ ಸುಯ್ಯೋ
|| ಹುಯ್ಯಲು ಜಡಿಮಳೆ ಹುಯ್ಯಿರಿ ಕೋಲ ||

ತಕ್ಕಡಿ ಯಾಡಿಸೆ ಚೇಳಿನ ಕೊಂಡಿ
ವಕ್ಕಲ ಮಕ್ಕಳ ಬೊಕ್ಕಸ ಬಿರಿಯೆ
ಜೋಕು ದೀಪಾವಳಿ ಅಂಬಿನ ನೌಮಿ
ಹಾಕು ಚಾಮುಂಡಿಗೆ ಹಣ್ಣಿನ ದೌನ
ಹುಯ್ಯೋ, ದೀಪ ಸಹಸ್ರಕೆ ಹುಯ್ಯೋ
|| ಹುಯ್ಯೋ ಭಾವ ! ಬನ್ನಿಯ ಕೋಲ ||

ಬಿಲ್ಲಿದ್ದು ಬಾಗಲು ಹೋತನ ಮುಂದೆ
ಎಲ್ಲ ಮಂದೇವರು ಹತ್ತಿತು ತೇರ
ನಾಲಾಡುತಿತ್ತಲೆ ಪರಿಷೆಗೆ ಬಾರೋ
ತೇಲಾಡಿದಾವೋಡವೆಲ್ಲಿದೆ ನೋಡೋ
ತುಯ್ಯೋ, ತುಯ್ಯೋ, ತೇರಿನ ಮಿಣಿಯ
|| ಹುಯ್ಯೋ, ಹುಯ್ಯೋ, ದೇವರ ಕೋಲ ||

ಮಡಕೆಯಲಾಡಲು ಮೀನಿನ ಬಾಲ
ಮೃಡನವ ತಪಸಲಿ ಕೂರುವ ಕಾಲ
ಕಾಡುವ ಮಾಗಿಗೆ ಧಾವಳಿ ಜೋಡಿ
ಜೋಡು ಕಂಗ್ಗಂಬಳಿ ಕಾಮನ ದಿನಕೆ
ಕಾಯೋ ಕಾಯೋ ಕಾಮನ ಬೆಂಕಿ
|| ಹುಯ್ಯೋ, ಹುಯ್ಯೋ, ಭಾಗ್ಯದ ಕೋಲ ||

---

# ಚಿಟ್ಟೆ

---

ನಿತ್ಯ ನಿತ್ಯ ಪಾರಿಜಾತ
ಚಂಪ ಮಂದಾರವು
ಮರವು ಗಿಡವು ಬೇರ ಬಳಿಗೆ
ಸುಮವ ಸಲಿಸಲು
ಭೂಮಿ ತಾಯಿ ಬಣ್ಣ ಬಣ್ಣ
ದರಳ ನಿವುಗಳ
ಮಾಲೆಯೆತ್ತಿ ಪ್ರೇಮದಿಂದ
ಮೇಲೆ ಎಸೆವಳು.
ವ್ಯೋಮವದನು ಎತ್ತಿ ಜಗಕೆ
ನೋಡಿರೆನುವನು:
|| ಇಲ್ಲಿ ನೋಡಿ ಕಾಮಹಾರವೆಂದು ತೋರ್ಪನು ||
ದೇವನದನು ಪ್ರೇಮಹಾರ
ಕೊರಳಲಿಡುವನು !
ಬಣ್ಣ ಬಣ್ಣ ಹೂವ ಬಿಡಿಸಿ
ಜೋಡಿ ಮಾಡುವ.
ಚಿಣ್ಣರೆದುರು ಕುಣಿಯಿಕಂದು
ಕೆಳಗೆ ಹಾಕುವ.
ಹುಡುಗರವನು ಚಿಟ್ಟೆಯೆಂದು
ಹಿಡಿಯ ಪೋಪರು !
ಹಿಡಿಗೆ ಸಿಗದೆ ಹೂವ ನುಡಿಸಿ
ಚಿಟ್ಟೆ ಪೋಪವು !

---

# ಏನು ಪಾಡಲಿ

---

ಏನ ಪಾಡಲಿ ನಿನ್ನ ಆಮೋದಕಿಂದು
ನೀನಿತ್ತ ಪ್ರೇರಣೆಯು ನಿನ್ನದೀ ಮುರುಳಿ
ಘನ ಪದಕೆ ಪದವಿಟ್ಟು ಧನಿ ಧನಿಯು ಧಾಟಿಯಲಿ
ಘನವರಣ ಹನಿರಸದ ಬಲು ಸಿವುರಿನ
ಎಣಿಸಿಟ್ಟ ಪ್ರಾಸಗಳ ಜೋಡಿಸಿದ ಮೇಣಗಳ
ಕಣಕಣನೆ ದನಿಗೊಡುವ ಗಜ ಗಬ್ಬ ಬೇಕೆ

ಸಿರಿ ಸಿರಿಯ ನವನುಡಿಯು ಹೊಳೆ ಹೊನ್ನ ಸರಿಗೆಯಲಿ
ಸರಿದಿಟ್ಟು ತರತರದ ಸಿರಿರಾಗ ವರಸೆಯಲಿ
ಮರಮುರಳಿ ಶೃತಿನೋಡಿ ಹೊಂಗಳಲ ಪ್ರಾಣಗಳ
ಬೆರಳಲ್ಲಿ ನುಡಿಸುತ್ತ ಮನ ಮರೆಸಲೊ

ಹೊಸಪದವ ಹಳೆಪದವ ಹೊಸದಿಟ್ಟು ಹೊಸಪರಿಯು
ಹೊಸಧಾಟಿ ಹೊಸಭಾವ ಪೊಸೆವೊಂದು ಲಾವಣಿಯು
ನಸುನಗುತ ರಸವರಿದು ನೀ ಮೋದ ಪಡುವಂಥ
ಮಿಸುನಿಯಾ ಸ್ಪರ್ಶದಾ ಕೃತಿಯೊಂದು ಬೇಕೋ

ಚಳವಳಿಯು ಭಾವಕಿವೆ ಕಿಡಿ ಇಡುವ ಪದಗಳಿವು
ತಿಳಿವಹ್ನಿ ಅಸಿತವಿದಕಿದೆ ಭಕುತ ಮನಧವಿಸು
ಹೊಳೆಯಾಯ್ತು ಗುಪ್ತಾಗ್ನಿ ಉಕ್ಕುತಿದೆ ಜ್ವಾಲೆಯಿದು
ತಿಳಿಹು ಮನದಿಷ್ಟಾರ್ಥ ಪಾಡಲೇನ

ಗುಡ್ಡ ಕಾಡಿನ ರೂಪು ಅಡ್ಡವಿಸಿ ವರಣಿಸಲೊ
ಗುಡ್ಡದಿಂ ಧಡಧಡನೆ ಹಾವ್ರುದರ ಶೃತಿಗೆ ?
ಹೆಡ್ಡರೆಲ್ಲರು ಕೂಡಿ ಧೂಳ ರೌರವದಲ್ಲಿ
ಅಡ್ಡಾಡಿ ವೈಮರವ ಪರಿಯ ಬಣ್ಣಿಸಲೊ ?

ನಗರಗಳು ಬೆಳೆದಳಿದು ಹನುಮ ಭೀಮರು ಎದ್ದು
ಜಗವ ತಲ್ಲಣಗೊಳಿಸೆ ! ಕಂತಿ ಪಂಪರ ಕವಿತೆ !
ಚಿಗಿದು ಮೊಳಗಲು ! ಇಳೆಯು ನಲಿದೊಲಿಯು ತಿರುವಾಗ !
ಜಗದಲ್ಲಿ ಬೆಳದಿಳಿದ ಕಥೆಗಳವು ಬೇಕೆ ?

ಆದಿ ಕವಿಯಿಂದೀಚೆ ಪದಶಿಲ್ಪಿಗಳನೆಲ್ಲ
ಸೋದರರ ! ಕೊಳಲ ಭಾಂಧವರನ್ನು ಮಾಯೆಯುಲಿ
ಓದದರ ಮುಂದೆತ್ತಿ ಸುಳಿದಾಡಿಸುತಲಿನ್ನು
ಹೋದ ವೈಭವವನ್ನು ಕಾಣಿಸಲೊ ಕನಸಲ್ಲಿ ?

ಇದ್ದಾಗ ಕರೆ ಎನದೆ ಕೂಡೆನದೆ ಕೊಳ್ಳೆನದೆ
ಹೊಯ್ದುಸೆದ ಕಲ್ಲಲ್ಲಿ ಹೂತಿಟ್ಟ ಭಕ್ತನನು
ಮುದ್ದಿಟ್ಟು ! ಕಡೆಕಡೆಗೆ ಪಾಡುವರು ರಗಳೆಗಳ !
ಸುಯ್ದೆದ್ದು ಮನವದನು ಪೇಳುತಿದೆ ಕೇಳ್ವೈ !

ಗೆಳೆಯರಾಗುಂಪಿನದು ಮಧುಯುಗದ ! ಮಧುಗಾನ
ಮೊಳಗುತಿದೆ ಮಹಿಷೂರ ಹೊಂಗಳಲ ! ಸವಿಗಾನ
ಬಲು ರವದ ಹೆದ್ದುಂಬೆ ! ಹೊಯ್ಸಳನ ಹೆಗ್ಗಾನ
ನಿಲದಿನ್ನು ಪೇಳ್ವೆ ಪಾಲಿಸಪ್ಪಣೆಯ

---

# ಸಾಂತಾಳಿ

---

ಅದುರುವ ಅಧರದಲಿರುವುದು ಗಾನವು
ಎದಗಿದ ಕುಸುಮವು ತುರುಬಿನಲಿ
ಕಳಕಳ ರವದಲಿ ನುಣುಪಿನ ಬೆಣಚಲಿ
—ಸುಳಿಯುವ ಹೊಳೆಯೋ ಯಾರೆಲೆನೀ—

ಕೆಲಸಕೆ ನಲಿವವು ನಿನ್ನಂಗಗಳು
ಅಲಸದೆ ನಡುನಡು ನಗುವದದೇಂ
ಮಂಜುಳ ಮಾತಿನ ಇಂಗಿತವೇನದು
—ಅಂಜದ ಕಂಗಳ ಭಾಷೆಯದೇಂ—

ಉಕ್ಕಿ ಹರಿಯುವ ! ಸೊಕ್ಕಿ ಬೀಳುವ
ನಕ್ಕ ನಗುವದು ಜಲಪಾತ !
ಏರುವ ಬೆಟ್ಟದ ಬೆನ್ನಿಂದಿಳಿಗೆ
—ಹಾರುವ ಝುರಿಯೋ ಯಾರೆಲೆ ನೀಂ—

ಯಾರಿಗೆ ಅರಮನೆ ಕಟ್ಟುವೆ ನಗುವಿನ
ಗಾರೆಯ ಗಚ್ಚಲಿ ಪೇಳೆಲೆ ನಾರಿ !
ಸೇರದು ಅಲಸಿಕೆ ಪ್ರೋತಿಯ ರೂಪಿಗೆ
—ನಾರಿಯು ನೋಡಲು ಸಾಂತಾಳಿ—

ಊರಿದೆ ಬಿದರಿನ ಮೆಳೆಗಳ ನಡುವಲಿ
ಮೂರೇ ಕೂಗಿನ ದೂರವದು !
ದಾರಿಯ ಹಿಡಿದಳು ಸಂಜೆಯ ವೇಳೆಗೆ
—ನಾರಿಯು ಹಾಡಿನ ಹೊಳೆಯಾಕೆ—

ಬಲು ದೂರದಲಿದೆ ಹಾಯುವ ಹಳ್ಳವು.
ಬಳಸುತ ಕಮಲದ ಕೆರೆಯನ್ನು
ಹೊಕ್ಕಳು ತಾಳ ಖಜೂರದ ಗುತ್ತಿಯು
—ಉಕ್ಕುವ ಗಾನಕೆ ಕಡೆಯಿರದೆ—

ಬಳಿ ಬಳಿ ಗದ್ದೆಗಳಲ್ಲಿಂದಿತ್ತಲು
ಕೊಳಲಿನ ನುಡಿಗಳು ಮೊಳಗುತಿವೆ
ಅಂಗವು ಅದುರಿ ಕದಂಬದ ವನದಲಿ
—ಮಂಗಳ ನೋಟವು ಗೋಧೂಳಿಯಲಿ—

ಡಂಕಣ ಶಿಲುಪಿಯು ಕೆತ್ತಿದನೇನೈ
ಕಂಕಣನುಸಿರನು ಕೊಟ್ಟಹನೇ
ಕಪ್ಪನೆ ಕಲ್ಲಿನ ಅಪ್ಸರ ಮೂರುತಿ !
—ತಪ್ಪಿತೆ ಮೂಲೆಯು ಮದನನ ! ಕೀಲು—

ಮೇದಿನಿ ಮೂಲೆಯು ಮದನನ ಕೈಯ್ಯ
ಮಾದರಿ ಗೊಂಬೆಯು ಸಾಂತಾಳಿ !
ತೋರುವ ನಗುವಿನ ಹಾರುವ ನಿರ್ಝರಿ !
—ನಾರಿಯು ನೋಡಲು ಸಾಂತಾಳಿ—

---

# ಭಂಡಾರ

---

ಅರಳಿ ದಳದಳ ಸುರಿಯೆ ರಜಕಣ-ಹರಿಯೆ ಮಧುರಸ ಮೆರೆಯೆ ದುಂಬಿಯು
ತಿರುಳಭಾವಕೆ ಹರಿಯೆ ವೀರ್ಯವು ಗೂಢ ತೆರದೊಳಗೆ
ಹೊರಗಣಾರ್ಥಿಕ ಸರದಿ ಕಳೆಯಲು-ಇರದು ಮಧುರಸವಿರದು ಶುಭರಜ
ವಿರದು ರಂಗಿನಪೆಂಪದಾವದು ಬಲಿಯೆ ಬಂಡಾರ.

× × × × × × × ×

ಹೊರಳಿ ಧ್ವಜಪಠ ಸುಳಿದು ಹೊಂಬೊಗೆ
ಹರಿದು ಹೊಗಳಿಕೆ ಮೊರೆಯೆ ಕವಿಗಳು
ಭರತಭುವಿಯಲಿ ವೀರ್ಯ ಹರಿಯಿತು ತಿರುಳಿನಂತರಕೆ
ಹೊರಗಣಾರ್ಥಿಕ ಸರದಿ ಕಳೆಯಿತು !
ಇರದೆ ಹೊಂಬೊಗೆಯಿರದೆ ಹೊಗಳಿಕೆ !
ಸುರಳಿ ಧ್ವಜಪಠ ಸುರಟಿ ಭವಸುಖ ಬಲಿತು ಭಂಡಾರ !
ನಾಡಹೃದಯವು ಸೊರಗಿ ಸುರುಟಿದೆ-ಆಡುವಾಕಳೆಯಿಲ್ಲ ಮೊಗದಲಿ
ನೋಡೆನೆಂಬೊಡೆ ನೆಳಲ ಕಾಣೆನು ಪೂರ್ವ ಶುಭಯುಗದ !
ನಾಡು ಬಲಿತಿಹ ಬೀಜಕೋಶವು-ಬೀಡು ಪೂರ್ವದ ಬೀಜ ಭಾಗ್ಯಕೆ !
ನಾಡು ಸೊರಗಿದ ನಾಡು ನಮ್ಮದು ! ಬರಿವ ಭಂಡಾರ !
ವ್ಯಾಸನಾವಾಲ್ಮೀಕಿ ಮೊದಲಾ-ದೇಸು ಕವಿಗಳು ವಕ್ಕಿ ತೂರುತ
ಭಾಸುರಾತ್ಮಕ ಭಾವವೆಲ್ಲವ ಕಾವ್ಯಕಣಜದಲಿ
ಏಸನಿಟ್ಟರೋ ! ಯೋಗಮರ್ಯದೊ-ಳಾಸುಯೋಗದ ಸುಗ್ಗಿ ಕಳೆಯಿತು !
ಈಸುಕಾವ್ಯಗಳೆಲ್ಲ ಕೇಳಿರಿ ರತುನ ಭಂಡಾರ !
ಜಂಬುದ್ವೀಪವು ಬರಿವಬೊಕ್ಕಸ ! ನಂಬಿನಂಬಿರಿ! ನಿಮ್ಮ ಹೃದಯುಗ
ಳೆಂಬ ಮೋಟೆಗಳೆಲ್ಲ ಬರಿವವು ನಾಳೆ ಶುಭಯುಗಕೆ !

# ಉದಯ ರಾಗ

ಬೇಸರವಾಗಿದೆ ನಗರದಲಾಟ
ಧೂಸರ ಧೂಳಿನ ಜೀವನವು
ಆಶಿಸಿ ಚಿಗುರೊಳಗಾಡಿತು ಗಾಳಿ
ಭಾಷೆಗೆ ನಿಲುಕದ ಭಾವಕೆ ಬೆಂದು.
ಬೇಗ ನಡೀ ಹೊರಡೇಳು ನಡೀ
ಕೂಗಿದಳಾವಳೊ ಕಾಡಕಿನ್ನರಿಯು

ಸೂಟೆಯು ಸಂದರೆ ನಂದಿಯ ಕೂಟ
ನೋಟಕೆ ಹಬ್ಬವು ಜೋಗದ ಪಾತ
ಮಾಟದ ಪುತ್ಥಳಿ ಬೇಲೂರ ನೋಟ
ಆಟದಲೇರಲು ದತ್ತನ ಪೀಟ.
ಬೇಗನಡೀ ನಡಿ ಬೇಗನಡೀ
ಕೂಗಿತು ಕಾಡಿಸಿ ನಾಡವ್ಯೆತಾಳೀ !

ಆ ಯಾತಿ ಪರ್ವತ ಕಳೆಗಳ ಸುಟ್ಟು
ಕಾಯುತಲಿಹುದಿನ್ನು ಜೀವನ ಘನಗೆ
ಬಾಯಾರಿದೀ ಪಕ್ಕಿ ಬೇಯುತಲಿಹುದು
ಆಯತದಿಂಬಹ ಮುಂಗಾರ ಹನಿಗೆ.
ಬೇಗನಡೀ ಹೊರಡೇಳುನಡೀ
ಕೂಗಿದಳಾವಳೊ ಕಾಡಕಿನ್ನರಿಯು !

ಪಡವಣ ಮಣಲಿದ್ದು ಹೂಣಿದೆ ಲಿಂಗ
ಅಡಿಯಿಡು ಅಲ್ಲಿಗೆ ಬಗೆದು ನೋಡುವಣ
ಮುಡಿಯೆಲ್ಲ ಸಡಲಿದೆ ವನದೇವಿಗೇಕೊ
ನಡಿನಡಿ ! ಯಾತಂಕವೇನೆಂದು ಬಗೆವೆ.
ಬೇಗನಡೀ ನಡಿ ಏಳುನಡೀ
ಕೂಗಿತು ಕಾತರಗೊಂಡಿಹ ನಾಡು !

ಕೋಗಿಲೆ ಪಾಡಲು ಕೇಕೆಯು ಕುಣಿಯೆ
ಕೂಗಲು ನಿರ್ಝರಿ ತೂಗೆ ಮಂಜರಿಯು
ಬಾಗಲು ತೆನೆಗಳು ರೇಗಲು ವೀಚಿ
ಈಗೆದ್ದು ಬಂದರೆ ಬಾರೆನೆ ವನವು.
ಬೇಗನಡೀ ಹೊರಡೇಳು ನಡೀ !
ಕೂಗಿತು ನಾಳಿನ ಕೇದಿಗೆ ಸುಳಿದು.

ಪೂವು ಪೂವಾಡಲು ಕಂಬನಿದುಂಬಿ
ಆವರಿಸುತಲಿಹುದಾರ್ಯರ ಕಂಪು
ಭಾವದ ಗರಿಯೇರು ಜಾಗರ ಮನವೆ
ಜೀವನದರಳನು ಅರುಣಗೊಪ್ಪಿಸುವೆ.
ಬೇಗನಡೀ ಮನ ಓಡುನಡೀ
ಕೂಗಿತು ಕಾಹಳೆ ನಾಳೆಯು ನೆನೆದು !

ಕಾವೇರಿ ! ಎಚ್ಚತ್ತು ಪಾಡುತಲಿಹಳು
ಸಾವೇರಿ ರಾಗದ ಗಾನ ಗೀತೆಗಳ
ನಾವೇರಿ ಪೋಗುವ ಜಾಗರದವರು
ಭಾವ ವಿಮಾನದೊಳರುಣ ದಿಬ್ಬಣಕೆ.
ಬೇಗನಡೀ ಹೊರಡೇಳು ನಡೀ
ಕೂಗಿತು ಖಂಡಿತ ನಾಡವೈತಾಳಿ !

# ಆತಂಕ

ಕುಂಟೆಯೊಲು ಕುಂಟಾಗಿ ಭಂಟತನಕಂಟಾಗಿ
ಅಂಟಿಟ್ಟು ಹೊಲಸಿಟ್ಟು ಹೊಳೆಯಾಗದಿಹೆನು !

ಸಿರಿನೀಲ ಬಾನದಲಿ ಅರಿಯದೆಲೆ ತನು ಮನದ
ಕಿರುಕುಳದ ಭಾರವನು ತಿರುಗುತಿವೆ ಮೋಡ.
ಹಕ್ಕಿ ಹಿರಿಯುವ ಕಾರ್ಯ ಮಿಕ್ಕಿಲ್ಲವೆಂದೆಂದು
ಸೊಕ್ಕಿರುವ ಹಲಧರರು ಸಿಕ್ಕಲ್ಲ ಜತೆಗೆ.
ಬಿಳಿ ಮೋಡಗಳನಟ್ಟು ಕಳೆದಿಟ್ಟು ಮುತ್ತುಟ್ಟು
ತಿಳಿಯದೆಲೆ ನಿಜಮನವ ಸಿಲೆಯಾಗಿ ನಿಲುತ
ನೀಲಗನ್ನಡಿಯಲ್ಲಿ ನೀಳದೇಹವ ನೋಡಿ
ಭಾಳನಾಚುವಳಾಕೆ ಶೈಲಸುತೆಯಾಕೆ.
ಚಿಗುರಿಲ್ಲ ಸೊಬಗಿಲ್ಲ ಮುಘಮುಗಿಪ ಪೂಸಿಲ್ಲ
ಬಿಗಿ ಮೊಗದ ಬಂಜೆಯಿದು ನಗಲಿಲ್ಲ ಹೃದಯ !
ಅರಳುವಾತಾವರೆಯ ಹರಿಯುವಾ ನೀರುಗಳ
ಹರಿಸೋಡಿ ಚಿಗಿಯುವರ ಪರುಕಿಸಲಿ ಇಲ್ಲ !
ಕೆಲಸದೀ ಸುಳಿಯಲ್ಲಿ ಸಲುಕಿ ಬನ್ನಣಬಟ್ಟಿ.
ಸಲೆಜೀವಮುಸಿರಿಲ್ಲ ಕೊಲುತಿಹುದು ಕೆಲಸ !
ಬಿಟ್ಟ ಹಿಡಿದೆನ್ನತಾ ಮೆಟ್ಟಿಹಿಂಡುತಲಿಹುದು
ಕೆಟ್ಟಹಟದೀಜನದ ಭ್ರಷ್ಟತರ ಕೆಲಸ.
ಹೊಟ್ಟೆಗೀ ಜಾಳಿಗೆಯು ಬಟ್ಟೆಗೀ ಯೂಳಿಗವು
ಕೆಟ್ಟೆ ಕೆಟ್ಟೆನು ನಾನು ಸೃಷ್ಟಿ ದೃಷ್ಟಿಯಲ್ಲಿ.

ಕವಿದಿಹುದು ಬಲು ತಮವು ರವವಿಲ್ಲ ಹೊಳಹಿಲ್ಲ !
ಶಿವನೊಡನೆ ನಿಲುತಿನ್ನು ಕವಿಯಾಗಲಿಲ್ಲ !

# ಪ್ರೇಮ

ಪ್ರೇಮ ! ವಿಚಿತ್ರ ವಸ್ತುವಾಗಿದೆ ಜಗದಿ ! ಅದ್ಭುತ ಶಕ್ತಿ ನಿಧಾನ.
ನಿದ್ರೆಯಲದು ಜಾಗೃತಿ ! ಜಾಗೃತಿಯಲಿ ಅಪ್ಪುದು ನಿದ್ರೆ ಸಮಾನ.
ಪ್ರೇಮದಮಲು ಮುಸುಕುವುದಾರಿಗೆ ಅಕ್ಷಿಗಳಲಿ ಭರಪೂರ
ಎಚ್ಚರ ನಿದ್ರಾ ಎರಡೂ ಅವರಿಗೆ ಆಗಿ ಹೋಗುವುದೈ ದೂರ !

ಗಂಧವಿಲ್ಲದ ಹೂವಿನಂತೆಯೆ ಚಂದ್ರ ಚಂದ್ರಿಕಾಹೀನ !
ಹಾಗೇ ನೀರಸ ಮಾನವ ಜೀವನವಿದ್ದರೆ ಪ್ರೇಮ ವಿಹೀನ
ಪ್ರೇಮ ಸ್ವರ್ಗವು ! ಸ್ವರ್ಗ ಪ್ರೇಮವು ! ಪ್ರೇಮ ಅಶಂಕ ಅಶೋಕ.
ಈಶ್ವರಪ್ರತಿಬಿಂಬ ಪ್ರೇಮವು ! ಪ್ರೇಮ ಹೃದಯದಾಲೋಕ.

ಜಗದಲಿ ಬಂದರೆ ಪೀಡೆ ಸರ್ವವೂ ಅಪ್ಪುದು ಹೃದಯ ಅಧೀರ !
ಆದರೆ ಸಿಹಿಸಿಹಿ ಸೊಗಸುವುದೈ ಎದೆಯಲ್ಲಿ ಪ್ರೇಮದಾ ಪೀಡಾ.
ವ್ಯಾಕುಲವೆನಿಸದು ಪ್ರೇಮ ಪೀಡೆಯಿಂ ಯಾರದದೆಂದೂ ಪ್ರಾಣ
ಭಾಗ್ಯಹೀನ ನವ ನಿಷ್ಠುರನೈ ನಿಜ ಎದೆಯವನದು ಪಾಷಾಣ.

ಯಾರ ಮೇಲೆ ದಯಾದೃಷ್ಟಿ ಬೀರ್ವನೋ ಮಂಗಳ ಮಯ ಭಗವಾನ !
ಪೂರ್ಣ ಪ್ರೇಮ ಪೀಡೆಯಲಿ ಹಿಂಡುವನವನು ಆತನ ಪ್ರಾಣ !
ಯಾರಿಗೆ ಅನುಭವವಾಗಿದೆ ಪ್ರೇಮದ ಪೀಡೆಯ ಬಹು ಆನಂದ
ಆತನಿಗಿಂತ ದೊಡ್ಡವನಾರು ಸುಖಿ ! ಇಹದಲಿ ಸ್ವಚ್ಛಂದ.

ಪ್ರೇಮೋನ್ಮತ್ತ ಹೃದಯದಿ ಇರದೈ ! ಹೀನ ವಿರೋಧ ಕ್ರೋಧ !
ದುರ್ಗುಣಕಾಗದು ಪ್ರೇಮದ ಪಥದಲಿ ಮಾಡುವುದು ಅವರೋಧ !
ಪ್ರೇಮ ವೇದನಾಮುಗ್ಧ ಜನ (ಇಹರೈ) ಸುಖನಿದ್ರಾಮಯಮತ್ತ
ಪ್ರೇಮದ ಬೆಳಕನು ಕಣ್ಣಲಿ ತುಂಬಿ ನೋಳ್ಪರು ಜಗವ ಸಮಸ್ತ !

ಹೂವಿನ ಮಂಜರಿ ಪಲ್ಲವದಲ್ಲಿ ಪ್ರಿಯತಮ ರೂಪ ವಿಲೋಕೀ !
ತುಂಬಿ ಹರಿವುದೈ ಮಹಾಮೋದದಿಂ ಪ್ರೇಮಿಯ ಎದೆತುಳಿಕೀ !
ನೋಡಿ ಮೊಗ್ಗನು ಮಾಡುವ ನಾತನು ಉನ್ಮತ್ತ ಪ್ರಲಾಪ
ಎಷ್ಟರ ತನಕ ಅಡಗುವೆ ನೀನೀ ದಳಗಳ ನಡುವೆ ಗೋಪ !

ಪ್ರೇಮ ತುಂಬಿಹ ಆರ್ದ್ರ ತೆರೆದಿಹ ಕಣ್ಣಲಿ ಶಶಿಯ ಸಹಾಸ
ಪ್ರೇಮಿಯು ಕಂಡು ಭ್ರಮಿಸುವನಾಗ ಪ್ರಿಯತಮ ಹಾಸ ವಿಕಾಸ.
ಸರ್ವವು ಆತಗೆ ಪ್ರೇಮದ ಮಾಯೆಯು ಸಚರಾಚರ ಸಂಸಾರ
ಪ್ರೇಮ ಮಗ್ನನು ನಿತ್ಯ ಮಾಳ್ಪನು ಪ್ರೇಮೋದ್ಯಾನ ವಿಹಾರ !

ಪ್ರೇಮವೇದನಾ ವ್ಯಥಿತ ಹೃದಯದಿಂ ಮಥಿತ ಪ್ರೇಮೋದ್ಗಾರ
ಉಕ್ಕಿ ಭೂಮಿಯ ತುಂಬಿಬಿಡುವುದ್ಕೆ ! ನವಜೀವನ ಉತ್ಸಾಹ !
ಕರುಣಾಭರದೀ ಪ್ರೇಮ ಕಂಬನಿ ಸುರಿವುದು ಸುಧೆಯ ಸಮಾನ
ನೆನೆಸುತ ದಯೆಯ ಬೀರನು ಕೊಡುವುದು ಜಗಕಾಶ್ರಯದಾನ !

ಜನಜನದಲ್ಲಿ ಪ್ರೇಮೀಕಾಂಬನು ಪ್ರಿಯತಮನಾಕಾಂತಿ
ಅದರಿಂದಾತಗೆ ಲೋಕಸೇವೆಯೊಳ್ ದೊರಕುವುದು ಅತಿಶಾಂತಿ.
ಪೀಡಿತನಾಪೀಡೆ-ಕ್ಷುದಿತನ ಹಸಿವೇ-ತೃಷಿತನ ದಾಹ-
ಕಳೆದು ನಿರಾಶ್ರಯ-ಆಶಾರಹಿತಗೆ ಕೊಡುವನು ಉತ್ಸಾಹಾ !

ಕೃಶಿತ ಜಾತಿಯ ಉನ್ನತಿಗೈಸಿ ನಿವಾರಿಸಿ ಕಂಟಕ ದೂರ
ಪ್ರೇಮೀ ಪರಮ ತೃಪ್ತನಪ್ಪನು ಆಹ್ಲಾದಿತ ಭರಪೂರ.
ದಯೆ ! ಕರ್ತವ್ಯ ! ಎಂಬುದಿಲ್ಲ-ಅಲ್ಲ ! ಆತನದಾರಿಗು ದಾಸ !
ಆಶಿಪನಾತನು ಸದಾ ನೋಡಲು ಪ್ರಿಯತಮ ರೂಪ ವಿಕಾಸ.
ರೂಪವೆಲ್ಲಿದೆ ? ಆರ್ತಮುಖದಲಿ-ಪ್ರಕೃತಹರ್ಷದ ಹಾಸ
ಆಗುವುದೆಂದು ! ಉದಿತವಾಗಲೀ ಪ್ರಿಯತಮ ರೂಪವಿಕಾಸ

[ಶ್ರೀ ಕವಿವರ ರಾಮನರೇಶಜೀ ತ್ರಿಪಾಠಿಯವರ ಹಿಂದೀ 'ಮಿಲನ' ದಿಂದ]

---

# ನಾವಿಕರು

---

|| ನಾವಿಕರಾವಿಹೆವು ಜೀವಾರ್ಣವದಲ್ಲಿ ತೇಲುತ್ತಿಹೆವು ||

ನಾವು ಜನುಮದ ನಾವೆ ಯೇರ್ದವು
ಸಾವು ನೋವನು ದೂರಲಿರುವೆವು
ಜೀವಕಕ್ಷರ ಭಾವ ಹೊಳೆಯಲಿ
—ಜಾವ ಜಾವಕೆ ನಾಡನೆನಹಲಿ—

ಅಲ್ಲಿತೆರೆ ಕೊರೆ ಕಲ್ಲು ಸುಳಿಯಿವೆ !
ಇಲ್ಲಿ ಹೂಡಿರಿ ! ದೋಣಿಯೆನ್ನುತ
ಎಲ್ಲಸಾಗರ ನಾಭಿಯಲ್ಲಿರೆ !
—ಚಲ್ವಬುದ್ಧನ ಗರುಡದೀಪವು—

ನುಡಿದು ನಡೆಯುತ ತೇದು ತೊಳೆಯುತ
ಗಡಿಯ ಬೆಳಗುತ ನಿತ್ಯ ಜೀವನ-
ಉಡಿಗೆ ಯುಡಿಸುತ ತಿನಿಸಿನಲಿವೆಡೆ
—ಒಡನೆ ಯಾಡಲಿ ಗಾಂಧಿರೂಹದು—

ನೋಡಿನಲಿಯಲು-ಹೂಡಿದಣಿಯಲು
ಕೂಡೆಕರೆಯಲು-ಜೋಡಿಗತಿಥಿಯ !
ಕಾಡಿರವಿರಾ ಕೂರಜಿಹ್ವೆಯು
—ಹಾಡಕಲಿಸಲಿ ನಾಡನೆನಪಿನ—

ನಲವುನೋವಿನ ಉಬ್ಬರಿಳಿತವ
ಗೆಲಿದು ತೇಲಲು ಜೀವಜಲಧಿಯ
ಲಿಳಿದು ಹೊರಟೆವು ! ನಾಡನೆನಹಿನೊ
—ಳಳಿವುದುಳಿವುದ ಬಲ್ಲನಾತನು— ನಾವಿಕರಾವಿಹೆವು

# ನರ-ವಾನರ

ಕಾಡಿನ ಕೋತಿ ಬಿದುರಿನ ಚದುರೆ ಖಾಸ ಬಂಗ್ಲಿ ಬೋನಲ್ಲಿ,..............
ವಿಕಾರ! ವಿಕಟ! ನಗೆಗೇಡೆಂದು ಹಳಿವರು ನಾವು ಮಾನವರು!
ಗಡವಮಂಗ, ಬಾಲದಕೋತಿ, ಮೊಂಡುಬಾಲ, ನೀಲಮೂಗು,
ಈ ಪರಿಯುಂಟು ಮಂಗಗಳು ಹಣ್ಣೇ ತಿಂದು ಜೀವಿಪವು;
ಸಂಶಯ ಬಂತು ಆಕೆಗೆ! ನೀವೇ ನೆಂಬಿರಿ ಉತ್ತಮರೆ?
ಮಾನವರು ನಾವು! ವಾನರರು ಅವು! ಯಾರು ಹೇಳಿ ನಗೆಗೇಡು?
ಕೂದಲು ಉದುರೆ, ಹಲ್ಲುಕಳಚೆ, ಗುಳ್ಳೆಗಣ್ಣು ಗಜ್ಜುಗವಾಗೆ!
ಚರ್ಮವೊಂದೇ ವ್ಯತ್ಯಾಸ! ವಸ್ತ್ರವೊಂದೇ ವ್ಯತ್ಯಾಸ!
ಎಂಥ ವಿಕಾರ ಅಡಗಿದೆ ಇಲ್ಲಿ ಮಾವನ ದೇಹದಲಿ........!
ಇನ್ನೂ ಸೂಕ್ಷ್ಮ ತೋರಿಸಬಲ್ಲೆ-ತೋರಿಸಿ ನಿಮ್ಮ ನೋಯಿಸಲೊಲ್ಲೆ!
ಆದರೆ, ನೋಡಿ, ಒಮ್ಮಾತಿನಲ್ಲಿ ಇದ್ದರೆ ಜೋನಿನ ಒಳಗಡೆನಾವು
ಕಾಣುವೆವೆಷ್ಟೋ ಅವಕಿಂತ ಅ-ವ-ಲ-ಕ್ಷ-ಣ!................
ತುಸುವೂ ಇಲ್ಲ ವ್ಯಾಯಾಮ! ಯೌವ್ವನ ಕಳೆಯಲು ಪರಿತಾಪ!
ನುಂಗುವುದಂತೂ ಲಾಡು ಚಿರೋಟಿ ತಿಂದರೆ ಅರಗದು ನಮಗೇ ಗೊತ್ತು!
ಗುಡ್ಡದ ಗಾತ್ರ ತಂಬಾಕು ಸೇದಲು ಸಾಲದು ನಿತ್ಯ ನಿತ್ಯ!
ಸಾಗರದಷ್ಟು ಸಾರಾಯಿ ಕುಡಿಯದೆ ತೃಪ್ತಿ ನಮಗೆಲ್ಲಿ?
ಯಾಕೋ ಏನೋ ಯಾರಿಗೆ ಗೊತ್ತು ಮಾನವರೆಲ್ಲರ ಪರಿಯಿಷ್ಟೆ!
ಕಾಯಗಳನ್ನು ಕಸುವಾಗಿಡಲು ಹಣ್ಣೇತಿಂದು ಇರಬಹುದಲ್ಲ?
ಆದರೆ ನೋಡಿ ಹಣ್ಣೆಲ್ಲ ವಾನರರಾಹಾರ!

ಹಣ್ಣು ಎಂದರೆ ಸಾಮಾನ್ಯ ಅಲ್ಲವು ಕೇಳಿ ನಿವೆಲ್ಲ!
ಬೇಸಿಗೆ ಬಿಸಿಲು, ಮಾಗೀ ಗಾಳೀ, ಭೂಮೀ ಸಾರ, ಜಡಿಮಳೆಯು
ಎಲ್ಲ ಸೇರಿ ಹಣ್ಣಿನ ರೂಪ ತಿಳಿಯದೆ? ನಿಮಗೆ? ಈ ಗುಟ್ಟು?

ದೇಹವ ಶೋಧಿಸಿ, ಮಿದುಳನು ತೊಳೆದು,
ದ್ವೇಷದ ದೋಷದ, ಇಲ್ಲಣ ತೊಡೆದು
ಮಾನವ ದೇಹವ ದೇವರ ಭಾವಕೆ ಸರಿಸಮನೆನಿಸಲು ಹಣ್ಣೇ ಬೇಕು !
ಆದರೆ, ನಾವು ದೇವರ ನೋಡಿಸಿ ಹಾ-ಯಾ-ಗಿ-ಹೆ-ವು !.......... ....
ಅದಕೇ ತಾನೇ, ಅವು ತಾವಾಗಿ ಕಾಣುತ ನಮ್ಮನುಹರಿದೂ ಹಾರಿ,
ಹತ್ತೀ, ಕುಣಿದೂ !...................
ಬೆಳಗೂ ಬೈಗೂ, ತಲೆಕೆಳಗಾಗಿ ನೇತುಬಿದ್ದಿವೆ ಬೋನಲ್ಲಿ !
ಮಾಡುತಿಹವೆ ಅಪಹಾಸ್ಯ? ಮಾಡುತಿಹವೆ ನೀತಿಬೋಧೆ?
ನಗರದ ನರರ ಪರಿಮಿಷ್ಟೆ ! ಬೋನಿನ ವಾನರರರಿವಷ್ಟೆ
ಆದು ನೋಡಿದರೆ ದೈವತ್ವ ! ಅದರ ವಿಕಾರವೆ ನಮಗೆ ಮಹತ್ವ !

---

# ಹುಳಿ ಹಣ್ಣು

---

ಕೊಂಬೆ ರೆಂಬೆಯಲ್ಲಿ ಹಣ್ಣು ನೇತುಬಿದ್ದರೆ
ತುಂಬ ಹಸಿದ ನರಿಯು ಬಂದು ನೆಗೆದು ನೋಡಿತು.
ಚಿಗಿದು ನೆಗೆದು ನೋಡೆ ನರಿಗೆ ನಿಲುಕದಾಯಿತು.
" ತೆಗೆ, ಅದೆಲ್ಲ ಹುಳಿ ! " ಎಂದು ನರಿಯು ಹೊರಟಿತು.
ನೇರಿಳೆಲ್ಲ ಹುಳಿಯೆ ಆಯ್ತು ಸಾಗದಿದ್ದ ರಾಯಗೆ !
ಏರಿ ಹಾರಿ ಓರಬರಲು ಧರೆಯ ಹಣ್ಣು ಹುಳ್ಳಗೆ !

---

ಕ
ನ
ಸು

ಪಿಡಿಗೆ ಆಡವೆನ್ನುವೊಲು ! ನಿಡುಗತ್ತಲಡಗಿರಲು
ಸುಡುವ ಮನದಪಮಾನದಲಿ ಬೆಂದು ಬೆಂದು !
ಕಡುದುಗುಡ ಭಾರವನು ಹೊರುತಿರುವಳಾರೊ...........
ಅಮಮ ! ಮಲಗಿರಲೆಲ್ಲ ಮೈಮರೆದು ಮರೆದು !—

ದೂರದಾತಾರೆಗಳು ತೀರದಾದುಗುಡಕ್ಕೆ
ತುಂಬಿ ಕಂಗಳ ನಿಂದು ನಿಡುಸುಯ್ದು ನೋಡಿ-
ಅಂಬ ! ನೀನಾರೌವ್ವ ದುಗುಡವೇನೆನಲು
ಅಮಮ ! ಮಲಗಿರಲೆಲ್ಲ ಮೈಮರೆದು ಮರೆದು

ಯಾರದಾರಲಲ್ಲಲ್ಲಿ ! ದಾರಿಯಲಿ ನಿಲ್ಲುತಲೆ
ಕುಂಟುತ್ತಲೆಡವುತ್ತ ನಡೆಯುತ್ತಲಿಹಳು
ಎಂಟು ರಾಜ್ಯದ ಮಾತೆ ಗಂಭೀರೆ ಯಾರೊ !
—ಅಮಮ ! ಮಲಗಿಹರೆಲ್ಲ ತನುಮನವ ಮರೆದು—

ಸೆರೆ ಹಿಡಿದ ! ಸರಪಳಿಯ ಸರಸರಕೆಜಣಜಣಕೆ
ನೆರೆ ಹಳಿವ ನಿಡುನಿಟ್ಟುರದ ನುಡಿಗೆ ನಡುಗಿ !
ಸೆಳೆದೊಯ್ಯುವಳು ಅಡಿಗಳನು ! ಎಡವಿದರು ಎದ್ದು
—ಅಮಮ ! ಮಲಗಿಹರಿವರು ಮೈಮರೆದು ಮರೆದು—

ಈ ಜಗದ ತಾಯಿಗೀಸೋಜಿಗದ ಭಂಧನವೆ ?
ಪೂಜೆಗೊಂಬುವ ಪಾದ ಬಂಧನದಲಿಹಲು
ಪೂಜೆಮಾಳ್ಪನೆ ! ನಾನು ! ಸಂಕೋಲೆಯ ಸೆರೆಯ !
—ಅಮಮ ! ಮಲಗಿಹರೆಲ್ಲ ತನುಮನವ ಮರೆದು—
ಹೆಜ್ಜೆಯೊಂದಿಗೆ ಧನಿಯು ! ಗೆಜ್ಜೆ ಪಾಡಗವಲ್ಲ
ಸದ್ದ ಕೇಳಿದೆ ನಾನು ! ಸರಪಳಿಯ ಸದ್ದ.
ನಿದ್ದೆ ತಿಳಿದೆದ್ದು ನಾನೆದ್ದು ಕುಳಿತಿರಲು...........
—ಅಮಮ ! ಮಲಗಿಹರಿವರು ಮೈಮರೆದು ಮರೆದು—
ಜನದ ಗಜಬಿಜಿಯಲ್ಲಿ ! ತನುಮನದ ಕೂಗಿನಲ್ಲಿ !
ಕನಸಿನಾಸಿರಿಪಾದ ಸರಪಣಿಯ ಸೆಳೆವ...........
ಜಣ ಝಣವು ಕೇಳುತಿದೆ ಈ ಹೃದಯದಲ್ಲಿ !
—ಅಮಮ ! ಮಲಗಿಹರಿವರು ತನುಮನವ ಮರೆದು—

# ಹೊಲೆಯ

ಶುಚಿಯು ನಗುತಲಿ ಹಿಂದೆ ಬರ್ಪಳು
ಉಚಿತ ಮಾರ್ಗವು ತನಗಿದೆನುತಲಿ
ಸಚಿವ ! ಹೊಲೆಯನು ಹಿರಿಯ ಪೊರೆವನು ಹೊರಟು ನಿಂದೆಡೆಗೆ.

ಸಚಿವ ಬಾ ಧರೆಯೆಲ್ಲವಳೆಯುವ....... ....
ಶುಚಿಯ ಜಾಹ್ನವಿ ಹರಿದು ಶ್ರೀ ಹರಿ
ಗುಚಿತದಾಸನವಾಗಲೀಧರೆ ಪರೆಯ ಬಾ ಧೊರೆಯೆ !

ಚಿಗುರಿ ಬೆಳೆಯದ ಮನಗಳಿಲ್ಲಿವೆ
ಚಿಗಿದು ಉರಿಯದ ಭಾವವಿಲ್ಲಿದೆ
ಮೃಗದ ಗವಿಯೊಲು ! ಹೊಲಸ ನಿಟ್ಟೆದೆ ಹೊಲೆಯ ನಿಲ್ಲದೆಲೆ.

ನಗುವ ತಾಣವ ಕಂಡೆಯಾದರೆ !
ಹೊಗೆಯು ಸುತ್ತಿರೆ ಜಗದ ಕಳೆಯನು
ಅಗಗೊ ! ಹೊಲೆಯನ ಹೆಜ್ಜೆ ಹರಿದಿದೆ ನಾಡಿನುದ್ಧರಕೆ !

ತವಕ ಪಡದಿರು ಧರೆಯ ದೂರಿಗೆ.
ಭವದರಜದಲಿ ಹೊರಳಿ ಆಳುವ !
ಇವರ ಪುಣ್ಯಕೆ ನಾವು ಕಾರಣರೆನಿಸಿ ಬಾಳುವಣ.

ಭವದ ನಂಜನು ಕುಡಿದು ಕಾಯ್ದನ
ಶಿವನ ಸಮ್ಮುಖದಲ್ಲಿ ಹಿರಿಯನು
ಭವಣೆಯೆನ್ನದಲವನ ಸೃಷ್ಟಿಯ ಶುಭ್ರ ಮಾಡಿದವ !

ನಾಡ ಕುವರರ ಮಾಡೆ ಪರರನು
ನೋಡು ನೋಡವು ಹಿರಿಯರಾರ್ಜನೆ !
ಖೋಡಿ ಖೂಳರ ಸೇರುತಿರ್ಪವು ಇಹಕೆ ಪರಕಿರದೆ !

ಮಾಡದಿರು ಹುಲುಮನುಜ ! ಭೇದವ !
ಆಡದಿರು ಪರ ಪರೆಯನೆನುತಲೆ !
ನಾಡ ಮಂಗಳಕಾರಿ ! ನಿನ್ನನು ದೂರದೂರೆನುವ !

## ರಸಿಕ

ಶರದ ಚಂದ್ರನ ವಿರಹ ಗಾನಕೆ
ಸುರಿಸಿ ಹಿಮಜಲವೆಂಬ ಕಂಬನಿ
—ಚಿರ ಕಳಂಕಿಯ ಭಾವವರಿವಾ ಶಿಲೆಯೆ-ಭುವಿಯಲಿ ರಸಿಕನು—

ಅಣುವು ಕಣಗಳ ಚಿತ್ರ ಕೂಟದ !
ಕಣಕೆ ಕಣಗಳ ನೂತ ನಾದದ
— ಬೆಣಚು ! ಕರೆಯಲು ಪೋಗಿ ಮುತ್ತುವ ಲೋಹ-ಕಣಿಕವೆ ರಸಿಕನು—

ಹರಿದ ಬೆಳಕನು ಹೀರಿಕೊಳ್ಳದೆ
ತಿರುಗಿ ತಿರುಗಿಸಿ ಮಧುರ ಛವಿಗಳ
—ಹರಿಸಿ ಭುವಿಗನುರಾಗಿಯಾಗುವ ರತ್ನ ಶಲಕವೆ ರಸಿಕನು—

ಸಲಿಲ ಗರ್ಭನು ಬಳಸಿ ಬರುತಲಿ
ಚಲಿಸೆ ಜೋತಿಯ ಜಿಹ್ವೆಯಾಗಲಿ
—ವಲಿದು ಪೂಟಿಯೊಳರ್ಘ್ಯ ವೀಯುವ ಶೈಲಶಿಖರವೆ! ರಸಿಕನು—

ಆರಳಿ ದಳಗಳು ಹರಿಯೆ ಸೌರಭ
ಕರೆಸಿ ಕೊಳ್ಳದೆ ಬಂದು ರಸವನು
—ನಿರುತ ಹೀರುತ ಧೂಳೊಳದ್ದುವ ಮತ್ತ ಬಂಭರ ರಸಿಕನು—

ಪದವ ಕಂಡೊಡೆ ಪದವು ಮೊಳೆಯಲು
ಮುದವದುಕ್ಕಲು ಓದಿಯೋಮುತ
-ಚದುರ ಹೃದಯವು ಬಿರಿದು ಕಂಪಿಡಲಗಗೊ ! ನೋಡದೊ ! ರಸಿಕನು-

ಶಿಖಿಯನೆತ್ತುತಲಿರಲು ಸೊಡರು !
ಮುಖವ ಪಂಖವ ನೀಯುತಾಹುತಿ
—ಸುಖವೆ ಲಯವೆಂದೆಣಿಸಿ ! ಮುತ್ತುವ ಆ ಪತಂಗವೆ ರಸಿಕನು—

ಕವಿಯು ಕಮಲಕೆ ಮಿತ್ರ ರಸಿಕನು !
ಕವಿ ಸುಧಾರಸವುಣುವ ರಸಿಕನು !
—ಕವನ ಲಹರಿಯ ಕರೆವ ರತ್ನಾಕರನೆ ನಿರುಪಮ ರಸಿಕನು !—

# ಜಾಲಗಿರಿ ಓಓಓ ಜಾಲಗಿರಿ

---

ಊರ ಗಡಿ ! ಬಿಡಿ ! ತೆಂಕದಾರಿ ಹಿಡಿಯಿರಿ ! ಇರಿ ಗಿರಿ!
ಆಡಿಯಲಿ ! ಬರೆ ಪರಿಮಳ ಕರೆ ! ಕರಿ ಗಿರಿ ಅತಿ
-ನಡುವಲಿ ಇರುತಿಹ ಹಿರಿಮರ ಜಾಲಗಿರಿ !-ಅದೊ ಜಾಲಗಿರಿ ! ಓಓಓ-

ಓಓಓ ! ಜಾಲಗಿರಿ ! ವರುಷಕೊಮ್ಮೆ ಪುಷ್ಯದಲ್ಲಿ—
ಚಿಗುರ ಉಡಿಗೆ ! ಹೂವು ಮುಡಿಗೆ ! ಪಡೆದು ನಗುತಿಹೆ—
ಮಂಜರೀ ! ಓಓಓ ! ಮಂಜರೀ ! ಜಾಲಗಿರೀ ಮಂಜರೀ !

ಕೊತ್ತಳ ಕೋಟೆ ! ಬತೇರಿ ಬುರುಜು ತೊಡಿಸಿ ಗಿರಿಗೆ
ನಾಡ ಪೂಜೆ ಮಾಡಿ ನಿಂತ ಹಿರಿ ಅಜ್ಜ ಅಜ್ಜಿ ನೂತು
ನೇದ ಶ್ರೀ ಯ ನೆನಹ ಜೇನು ಹುಟ್ಟೆ ಯಿಟ್ಟ-ರೀತಿ ಸುಧೆ
-ಸುರಿಸಿ ಹರಿಸಿ ಧರೆಯ ದುಃಖ ತೇಲಿತೋಹೋ ! ಜಾಲಗಿರಿ !ಓಓಓ-

ಜಾಲಗಿರಿ ಓಓಓ ! ಮಂಜರೀ ! ದೇವಗಿರೀ ಮಂಜರೀ-
ಜಾಲಗಿರೀ ! ಹೂವಝುರೀ ! ಸಿರಿ ಮಧು ಮೇಳ ಝುರೀ !
ರಜತಝುರೀ ! ಜೋತಿಝುರೀ ! ಮಧುಃಗಿರಿ ಭುಜದಲೀ—

ಪೂಧೂಳೊಳೂಡಿ ಚಂದ್ರ ಮಧು ಹೀರಿ ದಾರಿ ಮೀರಿ
ಗಂಧಮಧುಗಿರಿ ಶಿರ ಬಿಡದಿರುತಿಹ-ಹೊ ಹೊ ಹೋ !
ಊರಮಡಿಲು ಮುಡಿಯಲೆಲ್ಲ ಆಗೋ ಸಿರಿ ಜಾಲಗಿರಿ !
ಜಾಲಗಿರೀ ! ಹೂವಝುರೀ ! ಸಿರಿ ಮಧು ಮೇಳ ಝುರೀ !

ಓಓಓ ! ಜಾಲಗಿರೀ ! ಜಾಲಗಿರೀ

# ಯಾತ್ರೆ

ಕಾವಡಿ ತಕ್ಕೊಂಡು ಕಾಶಿಯನು ಸಾರಿರಲು
ಗಂಗೆಯಲಿ ಕೆಸರಿತ್ತು ಹಾದಿಯಲಿ ಧೂಳಿತ್ತು
ವಿಶ್ವನಾಥನಿಗೆ ಮೈಲಿಗೆಯಾಗಿ ಅವನಾಗಿದ್ದ ಕಲ್ಲು !

ಪಾಪಿಗಳ ಬೀಡಾರವಾಗಿತ್ತು ವಾರಣಾಸಿ
ಸಾರನಾಥವು ಆಗಿತ್ತು ಅಸ್ಥಿರಾಶಿ !
ದ್ವಾರಕದಿ ನೋಡಿದೆನು ಗೋಪಾಲ ನಿರಲಿಲ್ಲ !
ಕೇದಾರಗದಲ್ಲಿದ್ದೆ ಘನಹಿಮವದಾಗಿತ್ತು ಪ್ರಕೃತಿ ಜೀವ
ದೇವನಿರಲಿಲ್ಲ ಅಲ್ಲಿ ! ಶಿವನಲ್ಲಿ ಕಾಣದಾದ !
ಆಬೆಟ್ಟ, ಈತೀರ್ಥ, ಈಸರಸು, ಆಉದಧಿ
ಎಲ್ಲೆಲ್ಲಿ ಹುಡುಕಿದರು ಸಿಗಲಿಲ್ಲದಾಹಶಾಂತಿ !
ದೊಡ್ಡವರ ಹುಡಿಕಿದನು ! ಹೆಡ್ಡ ! ಕೊಡುನಿನ್ನ ಬಿಸಿರಕ್ತ........
ಅರಿಯದಲೆ ದಾರಿಯನು ನಿಂತೆ ನೀರವದಲ್ಲಿ
"ಜಗದೊಳಗೆ ಕೀಳ ನೋರ್ವನ ಹುಡುಕು
ಅವನೊಳಗೆ ಹರಿಯುವುದು ಜೀವನದಿ"
ಎಂತೆಂಬ ಒಳಧನಿಯ ಕೇಳುತಲಿ....... ....ಹುಡುಕಿದೆನು !
ಎತ್ತಲೂ, ಯಾರೂ, ಇರಲಿಲ್ಲ, ನನಗಿಂತ ಕೀಳು !
ನನ್ನೊಳಗೆ ನಾನೆಂದೆ-"ಹುಡುಕು ನಿನ್ನೊಳಗೆ"-ನಿಂತೆ... .........
ನಿಂತ ನಿಲುವಿಗೆ ಸಂತು ಸಂತಸದ ವರತೆ ! ಕರಗಿ ನೀರಾದೆ
ಹರಿದು ತೊರೆಯಾದೆ ! ಮುಕ್ತಿಸಾಗರದಿ ರಾಸಲೀಲೆ !
ಆದಕಾಗಿ ನನಗಿಹುದು ಆಹ್ವಾನ !...............
ಪಡೆಯುವೆನು ಪರಸಾದ ! ಹಡೆಯುವೆನು ಸುಖಶಾಂತಿ
ಮುಡುಪಾಯ್ತು ಎನ್ನ ಜೀವ ! ಕೇಳೆನ್ನ ಜೀವ !

# ಹೊಯ್ಸಳ

---

ನುಡಿ ನುಡಿಯನಾರಿಸುತ ಒಡಲೊಳಗೆ ಕಿಚ್ಚಿಟ್ಟು
ಗುಡಿಗಳನು ಕಟ್ಟುವೆನು-ನುಡಿಯ ಶಿಲ್ಪದಲೀಗ
ಕಡುಯಶದ ಜಕಣನಿಗೆ ಒಡಲಬಾಂಧವನಾಗಿ
—ಹಿಡಿಸುವೆನು ಸಿರಿಕೊಡೆಯನು !—

ಹಿಡಿಸುವೆನು ಹೊಗಳಿಕೆಯ ಕೊಡೆಯ ಜಯಚಾಮರವ
ನಡಿವೆ ಶಿವಜ್ಯೋತಿಯಲಿ, ನುಡಿವರಾರಿದುರಲ್ಲಿ
ಬಿಡು ! ಸಳನ, ಹೊಯ್ಸಳನ, ಪ್ರೌಢನೃಪನ, ಗೈದಂಥ
—ಕಿಡಿಯಿರಲು ಕೆಚ್ಚೆದೆಯೊಳು—

ಆಗಿದು ಜಗಿಯಲು ನರರು ನರಿಗಳು !
ಯುಗ ಯುಗಾಂತರ ದಿಂದ ಹಿಂಗದೆ
ಸೊಗಸು ರಸವನು ವಸೆದು ವಸೆಯುವ ಪರ್ವ ಭಾರತದ

ಮಿಗಿಲು ಮಿಗಿಲೆನುವಂತೆ ರಸಿಕರು
ಸೊಗಸು ಕಬ್ಬನು ಬೆಳೆವೆ ಪೂರವ
ಯುಗದ ಸೊಬಗಿನ ಗುಪ್ತಗಾಮಿಯ ನೀರ ನಾನೆರೆದು

ಅರಿವಿನಟವಿಯ ಸಿಂಗ ನಾರ್ಭಟ !
ಮುರಳಿ ನಾಡಲಿ ಕೇಳಿ ಕೇಳಿತು...........
ಸಿರಿವಿಜಯ ನಗರಿಯಲಿ ಶಿಲೆಗಳು ನುಡಿಯಲೆಳಸಿಹವು

ಹಿರಿಯರೆಲ್ಲರು ತೆಗೆದ ಸುಗ್ಗಿಯ
ಪರಿಯ ಕಾಣುವಿರಲ್ತೆ ಗೆಳೆಯರೆ
ಬಿರಿಯುತಿದೆ ! ಸಳಕುಸುಮ ಹೊಯ್ಸಳ ಕಂಪ ಬೀರುತಿದೆ !

# ಆಶೀರ್ವಚನಗಳು

ಪದಗಳ ಜೋಡಣೆಯೇ ಒಂದು ಭಾರಿಯ ವಿದ್ಯನೆಂದರೆ ನಾನೂ ಒಬ್ಬ ಕವಿಯೇ ಆಗಬಹುದು. ಹಾಗಿಲ್ಲದೆ, ಬೆಳಕಿಗೊಂದು ದಾರಿಯನ್ನು ತೋರಿ, ಮನವನ್ನು ತಡೆದು ನಿಲ್ಲಿಸಿ, ಕರುಳಿನ ಆಳವನ್ನು ಕಲಕಬೇಕೆಂದರೆ ಕವಿಗಳು ವಿರಳರಾಗುವರು ! ಈ ವಿರಳರಾದವರ ಗುಂಪಿನಲ್ಲಿಯೇ ಹೊಯಿಸಳರೂ ನಿಮ್ಮೆದುರು ನಿಲ್ಲಬಹುದು. ಆಗ ಒಂದು ಗಳಿಗೆ ನಿಂತು; ಇವರ ರೀತಿಯನ್ನು ಕಂಡುಕೊಳ್ಳಿರಿ. ನಿಮ್ಮ ಮೆಚ್ಚುಗೆಯನ್ನಂತೂ, ಕೊಡಲೇ ಬೇಕಾದ ಸಂದರ್ಭ ಬಂದೀತು !

ವಸಿಷ್ಠ ಕುಲ,
ಅನಂತ ಶರ್ಮಾ.

ತಾ|| 8-4-35
ಮಧ್ಯಾಹ್ನ 4 ಗಂಟೆ
ಹರಿಜನಾಶ್ರಮ

ಕರ್ಣಾಟಕ ಸಂಘದಿಂದ ಮಧುಗಿರಿಯೂ, ಮಧುಗಿರಿಯಿಂದ ಕರ್ಣಾಟಕ ಸಂಘವೂ ಮಧು ಮಧುರವಾಗಿ ಬೆಳೆಯಲಿ ”

ವಿ. ಸೀ.

ಓಂ

ನಲ್

ಕಂಕಣ

ಹೊರಟಿದೆ

ಕಂಕಣವು

ತೆಂಕಣ ಪಡುವಣ

ಬಡಗಣ ಮೂಡಣ

ಸುತ್ತಿ ಹಾರಿ ಮೀರಿ

ಮಾಸ್ತಿ ಹಸ್ತ

ಸೋಕಿ ಜೀವ

ಕಳೆಯ ಪಡೆದು

ಎದ್ದು ಹಾರಿ

ಹದ್ದು ಮೀರಿ

ಕಂಕಣ

ಹೊರಟಿದೆ

ಕಂಕಣವು

× × ×

ಕಟ್ಟಿ ಕಂಕಣ

ನೆಟ್ಟು ನಿಂತು

ನಾಡ ಸೇವೆ

ಮಾಡಿ ಗೆಳೆಯರಿ

× × ×

ಡಂಕಣ ಜಕಣನ

ರುವಾರಿ ನೆನಹಿನ

ಕಂಕಣ ಹೊರಟದೆ ಕಂಕಣವು

ಲಕ್ಷಣ ಕಟ್ಟಿದ ಅಕ್ಕರ ಮಂಟಪ

ಇಗೋ! ಇದೊ ಕಂಕಣ ಹೊರಟಿಹುದು


*PRINTED AT :*

**GANAPATHI PRESS.**

*MADHUGIRI.*